ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ [illegible]

॥ ಓಂ ॥

# ಪ್ರಮಥಾಚಾರ ದೀಪಿಕೆ

***

ಸ್ಥಾಪಕರು
ಸಂಚಾಲಕರು ಮತ್ತು ಪ್ರಕಾಶಕರು:

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು
ಶ್ರೀ. ನಿ. ಜ. ಮುರುಘಾರಾಜೇಂದ್ರ ಪ್ರಸಾದನಿಲಯ
ಮುರುಘಾಮಠ, ಹಾವೇರಿಪೇಟೆ, ಧಾರವಾಡ

ಲೇಖಕರು :

ಶ್ರೀ ಹರ್ಡೇಕರ ಮಂಜಪ್ಪನವರು

೧೯೫೪

ಬೆಲೆ : ೦-೮-೦

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಮುರುಘಾಮಠ, ಹಾವೇರಿಪೇಟೆ

ಮಠ ನಂ. ೭೬೬೮

ಧಾರವಾಡ

ನೆಯ ಮುದ್ರಣ

೧೯೫೩



ಮುದ್ರಕರು :

ಶ್ರೀ ಬಿಳಗಿ ರಾಮಣ್ಣನವರು

ಲಿಂಗರಾಜ ಆರ್ಟ ಪ್ರೆಸ್

ಮನೆ ನಂ. ೨೨೦

ಮಾಳಮಡ್ಡಿ, ಧಾರವಾಡ



ಶ್ರೀ. ಮ. ಪ್ರ. ಸ್ವ. ಮುರುಘೇಂದ್ರ ಮಹಾ ಶಿವಯೋಗಿಗಳು

॥ ಶ್ರೀ ಗುರುಬಸವಲಿಂಗಾಯ ನಮಃ ॥

# ಮುನ್ನುಡಿ

❋

ಲಿಂಗೈಕ್ಯ ಶ್ರೀಮದಥಣಿ ಮುರುಘೇಂದ್ರ ಮಹಾ ಶಿವಯೋಗಿಗಳವರ ಸ್ಮರಣಾರ್ಥವಾಗಿ ಪ್ರಾರಂಭಿಸಿದ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥ ಮಾಲೆಯಲ್ಲಿ ಹರ್ಡೇಕರ ಮಂಜಪ್ಪನವರು ಬರೆದ "ಪ್ರಮಥಾಚಾರ ದೀಪಿಕೆ" ಯು ಹನ್ನೊಂದನೆಯ ಗ್ರಂಥವಾಗಿದೆ.

೧೯೩೫ನೇ ಇಸ್ವಿಯಲ್ಲಿ ಹರ್ಡೇಕರ ಮಂಜಪ್ಪನವರ ಅಪೇಕ್ಷೆಯಂತೆ ನಾವು ಕೆಲವು ದಿನ ಆಲಮಟ್ಟಿಯಲ್ಲಿದ್ದಾಗ್ಗೆ ಶ್ರೀ ಅಥಣಿ ಮಹಾ (     ) ತಪಸ್ವಿಗಳವರ ವಿಷಯಕ್ಕೆ ಚಿಕ್ಕದಾದ ಪುಸ್ತಕ ಬರೆಯಲಿಕ್ಕೆ ಅಪ್ಪಣೆ ಮಾಡಿದ್ದೆವು. ಅಪ್ಪಣೆಯಂತೆ ಬೇಗನೆ ಬರೆದು ಒಂದು ದಿನ ಸಾಯಂಕಾಲ ಎಲ್ಲವನ್ನು ಓದಿದರು. ನಂತರ ಮುದ್ರಣವೂ ಆಯಿತು. ಅದೇ ಪುಸ್ತಕವೇ " ಪ್ರಮಥಾಚಾರ ದೀಪಿಕೆ " ಯು. ಪುನಃ ಅದನ್ನೇ ಪರಿಷ್ಕರಿಸಿ ಮುದ್ರಿಸಲಾಗಿದೆ. ಈ ಕಾರ್ಯದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀಮಾನ್ ಹಾಲಭಾವಿ ವೀರಭದ್ರಪ್ಪನವರು ತಮ್ಮ ಇಳಿವಯಸ್ಸಿನಲ್ಲಿಯೂ ಕೂಡ ಈ ಗ್ರಂಥವು ಶುದ್ಧವಾಗುವ ಹಾಗೆ ಪರಿಶ್ರಮಪಟ್ಟು ಕಾರ್ಯ ಮಾಡಿ

ಕೊಟ್ಟರು. ಲಿಂಗರಾಜ ಮುದ್ರಣಾಲಯದ ಒಡೆಯರಾದ ಬಿಳಗಿ ಬಂಧುಗಳು ಅನೇಕ ಕಾರ್ಯಗಳಿದ್ದರೂ ಎಲ್ಲವನ್ನು ಬಿಟ್ಟು ಸ್ವಾಮಿ ಕಾರ್ಯವೆಂದು ಭಾವಿಸಿ ಬಹು ಶ್ರದ್ಧೆಯಿಂದ ಅಂದವಾಗಿ ಮುದ್ರಣ ಮಾಡಿಕೊಟ್ಟರು.

ಶ್ರೀ ಶಿವಯೋಗೀಶ್ವರನು ಸರ್ವ ರೀತಿಯಿಂದಲೂ ಸೇವೆ ಸಲ್ಲಿಸಿದ ಸರ್ವರಿಗೂ ಮಂಗಲವನ್ನೀಯಲೆಂದು ಹಾರೈಸುತ್ತೇವೆ.

ಶ್ರೀ ಮುರುಘಾಮಠ
ಹಾವೇರಿಪೇಟೆ, ಧಾರವಾಡ
ಮಾಘ ಶು. ೧ ಶುಕ್ರವಾರ ಶಕೆ ೧೮೭೪.
ದಿ. ೧೬-೧-೧೯೫೩

ಪ್ರಕಾಶಕರು

# ಪೀಠಿಕೆ

*

ಈ ವರೆಗಿನ ಎಲ್ಲ ಜನಾಂಗಗಳ ಚರಿತ್ರೆಗಳನ್ನು ನೋಡಿದರೂ ಪ್ರತಿಯೊಂದು ಜನಾಂಗದ ಪ್ರತಿಯೊಂದು ಕಾಲದಲ್ಲಿಯೂ ಗುಣ ಮತ್ತು ದೋಷಗಳು ಇದ್ದೇ ಇದ್ದವೆಂದು ತೋರುತ್ತದೆ. ಆದುದರಿಂದ ಎಲ್ಲ ಜನಾಂಗಗಳಲ್ಲಿಯೂ ಅವುಗಳ ದೋಷ ಕಳೆದು ಗುಣಗಳನ್ನು ಹೆಚ್ಚಿಸಲು ಅನೇಕ ಮಹಾ ಪುರುಷರು ಆಗಾಗ್ಗೆ ಪ್ರಯತ್ನಿಸುತ್ತಲೇ ಬಂದಿದ್ದಾರೆ.

ಎಂಟು ನೂರು ವರುಷಗಳ ಹಿಂದೆ ಹಿಂದು ಜನಾಂಗದಲ್ಲಿದ್ದ ನಾನಾ ದೋಷಗಳನ್ನು ತೆಗೆದು ಹಾಕಲು ಶ್ರೀ ಬಸವಾದಿ ಪ್ರಮಥರು ವಿಶೇಷವಾಗಿ ಪ್ರಯತ್ನಿಸಿದರು. ಇವರ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯು ಅತ್ಯದ್ಭುತವಾಗಿದ್ದಿತು. ಸಕಲರೂ ಗುಣಗ್ರಾಹಿಗಳಾಗಿ ಸಮಾನತೆ, ಸ್ವಾತಂತ್ರ್ಯ ಮತ್ತು ಸಹೋದರ ಭಾವನೆಗಳನ್ನು ಬೆಳೆಯಿಸಿಕೊಂಡು ಸುಖಶಾಂತಿಗಳಿಂದ ಜೀವಿಸಲೆಂದು ಹೊಸ ಮಾರ್ಗವನ್ನು ತೋರಿಸಿದರು.

ಮಹಾನುಭಾವರಾದ ಆ ಬಸವಣ್ಣನವರ ಈ ಅದ್ಭುತ ಪ್ರಯತ್ನಕ್ಕೆ ಅನೇಕ ಮಹಾತ್ಮರು ನೆರವಾಗಿ ಕನ್ನಡ ನಾಡಿನಲ್ಲಿ ಧಾರ್ಮಿಕ ಜ್ಯೋತಿಯು ಹೆಚ್ಚಾಗಿ ಬೆಳಗುವಂತೆ ಮಾಡಿದರು. ಶ್ರೀ ಪ್ರಭುದೇವರು ಶ್ರೀ ಸಿದ್ಧರಾಮ ಶಿವಯೋಗಿಗಳನ್ನು ಕುರಿತು ಹೇಳಿದ ಈ ಕೆಳಗಿನ

ವಚನದಿಂದ ಆ ಬಸವಸ್ವಾಮಿಯ ವಿಷಯದಲ್ಲಿ ಶ್ರೀ ಪ್ರಭುದೇವರಿಗೆ ಎಷ್ಟು ಭಕ್ತಿ ವಿಶ್ವಾಸಗಳಿದ್ದವೆಂಬುದು ಮತ್ತು ಆ ಮಹಾನುಭಾವರ ಕಾರ್ಯವು ಎಷ್ಟು ಪರಿಣಾಮಕಾರಿಯಾಗಿದ್ದಿತೆಂಬುದು ಸ್ಪಷ್ಟ ವಾಗುತ್ತದೆ.

ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವ ನೆರೆದು ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರಕಾಶ.

ಆ ಬೆಳಗಿನೊಳಗೊಪ್ಪುತ್ತಿರ್ದರಯ್ಯಾ ಅಸಂಖ್ಯಾತರು ಹುಸಿಯೆ? ಭಕ್ತನಿರ್ದ ಕ್ಷೇತ್ರವೆ ಮುಕ್ತಿಕ್ಷೇತ್ರವೆಂಬುದು ಹುಸಿಯೆ? ಭಕ್ತನಿರ್ದ ದೇಶವು ಪಾವನವೆಂಬುದು ಹುಸಿಯೆ?

ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯಾ.

ಶ್ರೀ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿ ಪ್ರಾರಂಭಿಸಿದ್ದ ಧಾರ್ಮಿಕ ಮಹತ್ಕಾರ್ಯಕ್ಕೆ ಸಹಾಯ ಮಾಡಲು ನಾನಾ ಭಾಗ ಗಳಿಂದ ಅನೇಕ ಮಹಾ ಮಹಾ ವಿಭೂತಿಗಳು ಆಗಮಿಸಿದ್ದರು. ಅಂತೆಯೇ ಅದು ಬಹು ಫಲಕಾರಿಯಾಯಿತು. ಆ ಎಲ್ಲ ವಿಭೂತಿ ಗಳೂ ತಮ್ಮ ತಮ್ಮ ಗುಣ ಸ್ವಭಾವಗಳಿಗನುಗುಣವಾದ ಬೇರೆ ಬೇರೆ ಕಾರ್ಯಗಳನ್ನು ಮಾಡುತ್ತಿದ್ದರೂ ಅವೆಲ್ಲವೂ ವೀರಶೈವ ಮತ ಪ್ರಸಾರಣೆಗೆ ಮುಖ್ಯ ಸಾಧನಗಳಾಗಿಯೇ ಪರಿಣಮಿಸಿದವು.

ರಾಜಕೀಯ ರಾಜ್ಯದಲ್ಲಿ ಶಾಂತಿ ಮತ್ತು ಸುವ್ಯವಸ್ಥೆಗಳು ನೆಲೆಸಬೇಕಾದರೆ ಬೇರೆ ಬೇರೆಯವರು ತಮ್ಮ ತಮ್ಮ ಬುದ್ಧಿ ಮತ್ತು

ಬಲಗಳಿಗನುಗುಣವಾದ ಬೇರೆ ಬೇರೆ ಕಾರ್ಯಗಳನ್ನು ವಹಿಸಿಕೊಂಡು ಹೇಗೆ ನಿರ್ವಹಿಸಬೇಕಾಗುತ್ತದೆಯೋ ಹಾಗೆಯೇ ಧಾರ್ಮಿಕ ರಾಜ್ಯ ದಲ್ಲಿಯೂ ಭಿನ್ನ ಭಿನ್ನ ವ್ಯಕ್ತಿಗಳಲ್ಲುಂಟಾಗುವ ಸಂಶಯ, ಅಸಮಾ ಧಾನ ಮುಂತಾದ ನಾನಾ ತಾಪಗಳನ್ನು ನಿವಾರಣೆ ಮಾಡಿ ಮಾನಸಿಕ ಶಾಂತಿ ಸಂತೋಷಗಳನ್ನು ನೆಲೆಗೊಳಿಸಲು ಬೇರೆ ಬೇರೆ ಶೀಲಾಚಾರ ಗಳ ದಿವ್ಯ ವಿಭೂತಿಗಳೂ ಬೇಕಾಗುತ್ತಾರೆ.

ಹಾಗೆ ಎಲ್ಲ ತರದ ಗುಣ ಕರ್ಮ ಸ್ವಭಾವಗಳ ಶ್ರೇಷ್ಠ ವ್ಯಕ್ತಿ ಗಳು ಒಂದು ಕಾರ್ಯದಲ್ಲಿ ಏಕ ಕಾಲಕ್ಕೆ ಸೇರಿದ್ದರೇನೇ ಆ ಕಾರ್ಯವು ಜಯ ಹೊಂದುತ್ತದೆ. ಶ್ರೀ ಬಸವಣ್ಣನವರು ಪ್ರಾರಂಭಿ ಸಿದ್ದ ಆ ಮಹತ್ಕಾರ್ಯಕ್ಕೆ ನೆರವಾದ ಯಾವ ಯಾವ ವಿಭೂತಿಗಳಲ್ಲಿ ಯಾವ ಯಾವ ಗುಣ ಶೀಲಾಚಾರಗಳಿದ್ದವೆಂಬುದು ಈ ಕೆಳಗಿನ ವಚನದಿಂದ ಸ್ಪಷ್ಟವಾಗುತ್ತದೆ.

ಬಸವಣ್ಣಂಗೆ ಸರ್ವಗುಣ ಶೀಲ. ಚೆನ್ನಬಸವಣ್ಣಂಗೆ ದಿವ್ಯಜ್ಞಾನಗುಣ ಶೀಲ. ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣನ ಉಭಯಗುಣ ಶೀಲ. ಮಡಿವಾಳ ಯ್ಯಂಗೆ ವೀರಗುಣ ಶೀಲ. ಅಜಗಣ್ಣಂಗೆ ಐಕ್ಯಗುಣ ಶೀಲ. ಚಂದಯ್ಯಂಗೆ ವೈರಾಗ್ಯಗುಣ ಶೀಲ. ನಿಜ ಗುಣಂಗೆ ಆತ್ಮಗುಣ ಶೀಲ.

ಸಿದ್ಧರಾಮಯ್ಯಂಗೆ ಯೋಗಗುಣ ಶೀಲ. ಮೋಳಿಗ ಯ್ಯಂಗೆ ಭೇದಗುಣ ಶೀಲ. ಘಟ್ಟಿವಾಳಯ್ಯಂಗೆ ತ್ರಿವಿಧ ಗುಣ ಶೀಲ. ಅಕ್ಕಗಳಿಗೆ ನಿರ್ವಾಣ ಗುಣ ಶೀಲ.

ಮಿಕ್ಕಾದ ಪ್ರಮಥರೆಲ್ಲರಿಗು ತಮ್ಮ ತಮ್ಮ ಸ್ವತಂತ್ರ ಗುಣ ಶೀಲ. ಎನಗೆ ಎಲೇಶ್ವರ ಲಿಂಗವು ಕೊಟ್ಟುದೊಂದೇ ವಿಶ್ವಾಸಗುಣ ಶೀಲ.

ಹೀಗೆ ಭಕ್ತಿ, ಜ್ಞಾನ, ಕರ್ಮ ಮತ್ತು ಯೋಗ ಮುಂತಾದ ಬೇರೆ ಬೇರೆ ಗುಣ ಶೀಲಾಚಾರಗಳುಳ್ಳ ಪ್ರಮಥರೆಲ್ಲರೂ ಆ ಒಂದೇ ಕಾಲದಲ್ಲಿ ಸೇರಿ ಪ್ರಯತ್ನಿಸಿದ್ದರಿಂದಲೇ ಆ ದಿವ್ಯತರವಾದ ಧಾರ್ಮಿಕ ಕ್ರಾಂತಿಯ ಕಾರ್ಯವು ಅಷ್ಟು ಪರಿಣಾಮಕಾರಿಯಾಗಿ ಪರಿಣಮಿಸಿತು.

ಬಸವಣ್ಣನವರ ಸೇವಾ ರೂಪವಾದ ಭಕ್ತಿಯು, ಚೆನ್ನಬಸವಣ್ಣನವರ ಮತಸಿದ್ಧಾಂತ ಪ್ರತಿಪಾದನೆಯ ಜ್ಞಾನವು, ಮಡಿವಾಳ ತಂದೆಗಳ ವೀರವೃತ್ತಿಯ ಕರ್ಮಗಳು ಧರ್ಮ ಪ್ರಸಾರಣೆಗೆ ಸಹಾಯವಾಗಿರಬಹುದು. ಆದರೆ ಸಿದ್ಧರಾಮ ಶಿವಯೋಗಿಗಳಂತಹ ಯೋಗ ಗುಣಶೀಲರಿಂದ ವೀರಶೈವ ಮತ ಪ್ರಸಾರದ ಕಾರ್ಯಕ್ಕೆ ಯಾವ ಸಹಾಯವಾಯಿತೆಂದು ಕೆಲವರು ಶಂಕಿಸಬಹುದು.

ಎಲ್ಲರ ದೇಹಾರೋಗ್ಯಕ್ಕೂ ಒಂದೇ ವಿಧವಾದ ಆಹಾರವು ಹೇಗೆ ಅನುಕೂಲವಾಗಲಾರದೋ ಮತ್ತು ಎಲ್ಲ ಸಸ್ಯಾದಿಗಳೂ ಒಂದೇ ವಿಧವಾದ ಭೂಮಿ, ಹವೆ, ನೀರು, ಗೊಬ್ಬರಗಳಿಂದ ಹೇಗೆ ಪ್ರಫುಲ್ಲಿತವಾಗಿ ಬೆಳೆಯಲಾರವೋ ಹಾಗೆಯೇ ಜನಸೇವೆ ಅಥವಾ ಧರ್ಮೋಪದೇಶ ಮಾಡುವವರೇ ಎಲ್ಲ ಮಾನಸಿಕ ತಾಪಗಳನ್ನು ಕಳೆದು ಸಕಲರೂ ಶಾಂತಿ ಸಂತೋಷಗಳನ್ನನುಭವಿಸುವಂತೆ ಮಾಡಲಾರರು. ಏಕೆಂದರೆ ಬೇರೆ ಬೇರೆ ವ್ಯಕ್ತಿಗಳ ಮನೋವೃತ್ತಿಗಳು ಬೇರೆ ಬೇರೆಯಾಗಿಯೇ ಇರುತ್ತವೆ. ಆದುದರಿಂದ ಅವುಗಳ ಸಮಾಧಾನಕ್ಕೆ ಬೇರೆ ಬೇರೆ ಗುಣ ಶೀಲಾಚಾರಗಳ ಶ್ರೇಷ್ಠ ವಿಭೂತಿಗಳೂ ಅವಶ್ಯವಾಗಿಯೇ ಇದ್ದಾರೆ.

ನಾನಾ ಧಾನ್ಯ, ಕಾಯಿ, ಪಲ್ಲೆಗಳು ಜನಜೀವನಕೆ ಅವಶ್ಯಕ. ಆದರೆ "ಉದ್ಯಾನಗಳೇಕೆ? ಹಸಿವೆಯಾಗಿದೆಯೆಂದು ಅಲ್ಲಿಯ ಹೂವು ಹುಲ್ಲುಗಳನ್ನೇನಾದರೂ ತಿನ್ನುವರೆ? ನಾವೇ ಜನರನ್ನು

ರಕ್ಷಿಸುತ್ತಿದ್ದೇವೆ; ಈ ಹೂವುಗಳು ಹುಟ್ಟಿದುದು ವ್ಯರ್ಥವೇ ಸರಿ. " ಎಂದು ಆ ಧಾನ್ಯಾದಿಗಳು ಹೆಮ್ಮೆ ಪಡಬಹುದೆ ? ಯಾರು ಆಯಾಸ ಗೊಂಡು ಆ ಉದ್ಯಾನಕ್ಕೆ ಬರುವರೋ ಅವರಿಗೆ ತಮ್ಮ ಸುಗಂಧವನ್ನು ಬೀರಿ, ಮನೋಹರವಾದ ನೋಟವನ್ನು ತೋರಿ, ಅವರ ಆಯಾಸ ವನ್ನು ಪರಿಹಾರ ಮಾಡುವುದಿಲ್ಲವೆ ? ಅವರ ಮನಸ್ಸಿನ ತಾಪವನ್ನು ಕಡಿಮೆ ಮಾಡುವುದಿಲ್ಲವೆ ? ಸೃಷ್ಟಿಯ ಆ ಸೊಬಗು ಕೋಪ ತಾಪ ಗಳನ್ನು ಕಳೆದು ಶಾಂತಿ ಸಂತೋಷಗಳನ್ನುಂಟುಮಾಡುವುದಿಲ್ಲವೆ ? ಎಂದಮೇಲೆ ಉದ್ಯಾನವೂ ಜನಜೀವನದ ಸುಖಶಾಂತಿಗಳಿಗೆ ಸಾಧನ ವಾಗಿದೆಯೆಂದೇ ಸ್ಪಷ್ಟವಾಗುವುದಿಲ್ಲವೆ ?

ಇಂದ್ರಿಯನಿಗ್ರಹದಿಂದ ಕೋಪ ತಾಪಗಳನ್ನೆಲ್ಲಾ ನೀಗಿ ದಿವ್ಯಾನಂದದ ಝರಿಯನ್ನೇ ತಮ್ಮಲ್ಲುಂಟುಮಾಡಿಕೊಂಡು ಪ್ರಶಾಂತ ವಾತಾವರಣದಲ್ಲಿ ಶೋಭಿಸುತ್ತಿರುವ ತೇಜೋಮಯನಾದ ಆ ಶಿವ ಯೋಗಿಯ ಬೀಡು ಉದ್ಯಾನದಂತೆಯೇ ಸರಿ. ಹೊಟ್ಟೆಬಟ್ಟೆಗಳಿಗೆ ಕೊರತೆಯಿಲ್ಲದಿದ್ದರೂ ನಾನಾ ಮಾನಸಿಕ ತಾಪಗಳಿಂದ ಬೆಂದು ನೊಂದ ಧಾರ್ಮಿಕರು ಆ ಯೋಗಿಗಳ ದರ್ಶನ ಸ್ಪರ್ಶನ ಸಂಭಾಷಣೆ ಗಳಿಂದ ಶಾಂತಿ ಸಂತೋಷಗಳನ್ನನುಭವಿಸುವುದಿಲ್ಲವೆ ? ಜನಾಂಗದಲ್ಲಿ ಇಂತಹ ಮನೋವೃತ್ತಿಯ ವ್ಯಕ್ತಿಗಳೂ ಇರುವುದರಿಂದ ಯೋಗಿಗಳು ಲೋಕ ಕಲ್ಯಾಣದ ಕಾರ್ಯಗಳನ್ನೂ ಮಾಡುತ್ತಿದ್ದಾರೆಂದೇ ಸ್ಪಷ್ಟ ವಾಗುತ್ತದೆ. ಮುದುಡಿದ ಮನಸ್ಸನ್ನು ಅರಳಿಸಿ ಆನಂದಗೊಳಿಸುವ ದಿವ್ಯ ಶಕ್ತಿಯು ಆ ತಪೋವನಗಳಲ್ಲಿರುವುದರಿಂದ ಧಾರ್ಮಿಕ ಕ್ಷೇತ್ರ ದಲ್ಲಿ ಯೋಗಿಗಳ ಬೀಡು ಉದ್ಯಾನವನವೆಂದು ಹೇಳಬಹುದು.

ಆದರೆ ಎಲ್ಲರೂ ಇದೇ ಮಾರ್ಗವನ್ನವಲಂಬಿಸಬೇಕಾದ ಆವಶ್ಯ ಕತೆಯಿಲ್ಲ. ಅದು ಇಷ್ಟವೂ ಅಲ್ಲ, ಶಕ್ಯವೂ ಅಲ್ಲ. ಎಲ್ಲವೂ ಉದ್ಯಾನಗಳಾದರೆ ಗದ್ದೆ ಹೊಲಗಳು ಬೇಡವೆ ? ಜನಾಂಗದ ರಕ್ಷಣೆಗೆ

ಅವು ಹೇಗೆ ಮುಖ್ಯವಾಗಿದ್ದು ಹೂದೋಟಗಳೂ ಅವಶ್ಯಕವಾಗಿವೆಯೋ ಹಾಗೆಯೇ ಧರ್ಮರಕ್ಷಣೆ ಮತ್ತು ಪ್ರಸಾರಣೆಗಳಿಗೆ ಭಕ್ತಿ, ಜ್ಞಾನ ಮತ್ತು ಕರ್ಮಮಾರ್ಗಿಗಳಂತೆ ಈ ಯೋಗಮಾರ್ಗಿಗಳೂ ಆವಶ್ಯಕ ವಾಗಿದ್ದಾರೆ.

"ಯೋಗಿಗಳು ಏಕಾಂತವಾಸಿಗಳು. ಅವರಿಂದ ಸಮಾಜ ಕ್ಕೇನೂ ಪ್ರಯೋಜನವಿಲ್ಲ. ಆ ಯೋಗವು ಅವರ ಮಟ್ಟಿಗೇನೇ ಪ್ರಯೋಜನಕಾರಿಯಾಗಿರಬಹುದು." ಎಂಬ ತಪ್ಪು ಅಭಿಪ್ರಾಯ ಗಳು ಜನಾಂಗದಲ್ಲಿ ಇತ್ತೀಚಿಗೆ ಹೆಚ್ಚುತ್ತಿರುವುದರಿಂದ ಈ ವಿಷಯ ವನ್ನು ಇಷ್ಟು ವಿವರವಾಗಿ ಪ್ರಸ್ತಾಪಿಸಬೇಕಾಯಿತು.

ಆ ಬಸವಾದಿ ಪ್ರಮಥರು ತೋರಿಸಿದ ದಿವ್ಯ ಮಾರ್ಗವನ್ನೇ ಅನುಸರಿಸಿ ಈ ವರೆಗೂ ಅನೇಕ ವಿಭೂತಿಗಳು ತಮ್ಮ ತಮ್ಮ ಗುಣ ಶೀಲಾಚಾರಗಳಿಗನುಗುಣವಾಗಿ ನಡೆದುಕೊಳ್ಳುತ್ತಾ ಬಂದು ವೀರಶೈವ ಮತವನ್ನು ಉಜ್ವಲಗೊಳಿಸಿ ಪೂಜ್ಯರಾಗಿರುತ್ತಾರೆ. ಇಂತಹ ಪ್ರಮಥ ಶ್ರೇಣಿಗೆ ಸೇರಿದವರಲ್ಲಿ ಅಥಣಿ ಶ್ರೀ ಮುರುಘೇಂದ್ರ ಶಿವಯೋಗಿ ಗಳವರೂ ಒಬ್ಬರು. ಈ ಮಹಾನುಭಾವರು ೨೦ ನೆಯ ಶತಮಾನದ ಆದಿಭಾಗದವರೆಗಿದ್ದರು ಇವರ ದಿವ್ಯವಾದ ನಡೆನುಡಿಗಳು ಹಿಂದಣ ಪ್ರಮಥರ ನಡೆನುಡಿಗಳನ್ನೇ ಹೇಗೆ ಅವಲಂಬಿಸಿದ್ದವೆಂಬುದನ್ನು ತೋರಿಸುವುದೇ ಈ ಪುಸ್ತಕದ ಉದ್ದೇಶವಾಗಿದೆ. ಅಂದಿನ ಪ್ರಮಥ ರಿಗೆ ಇಂದಿನವರನ್ನು ಸರಿಹೋಲಿಸಬಹುದೆ ? ಹಾಗೆ ಮಾಡುವುದು ಅನುಚಿತವೂ ಪಾಪವೂ ಆಗಿಲ್ಲವೆ ? ಎಂದು ಯಾರಾದರೂ ಶಂಕಿ ಸಿದರೆ ಅವರಿಗೆ ಉತ್ತರವನ್ನು ಶ್ರೀ ಆದಯ್ಯನವರೆಂಬ ಪ್ರಮಥರೇ ಹೀಗೆ ಹೇಳಿದ್ದಾರೆ.

**ಅಂದಿನವರು ಇಂದಿನವರು ಎಂಬ ಸಂದೇಹಿಗಳಿಗೆ**
**ಸಂದೇಹ ಮುಂದುಗೊಂಡಿಪ್ಪುದುನೋಡಾ. ಅಂದೊಂದು**

ಪರಿ ಇದೊಂದು ಪರಿಯೋ ಗುರುಲಿಂಗ ಜಂಗಮ ? ಅಂದೊಂದು ಪರಿ ಇಂದೊಂದು ಪರಿಯೋ ಪಾದೋದಕ ಪ್ರಸಾದ ? ಅಂದೊಂದು ಪರಿ ಇಂದೊಂದು ಪರಿಯೋ ಶರಣ ಲಿಂಗ ಸಂಬಂಧ ? ಅಂದೊಂದು ಪರಿ ಇಂದೊಂದು ಪರಿಯೋ ಅರಿವು, ಆಚರಣೆ ? ಅಂದೊಂದು ಪರಿ ಇಂದೊಂದು ಪರಿಯೋ ಸ್ಥಳ ಕುಳಂಗಳು ? ಅಂದೊಂದು ಪರಿ ಇಂದೊಂದು ಪರಿಯೋ ಸೌರಾಷ್ಟ್ರ ಸೋಮೇಶ್ವರ ಲಿಂಗವು ?

ನಮ್ಮಲ್ಲಿ ಭಕ್ತಿ ಭಾವನೆಗಳೂ ನಿಷ್ಠೆ ಸಾಹಸಗಳೂ ಕಡಿಮೆ ಯಾದರೆ ಆ ಮತತತ್ವಗಳೇನು ಮಾಡುವವು ? ಅವು ಅಂದಿದ್ದಂತೆಯೆ ಇಂದೂ ಇವೆ. ಅವುಗಳ ವಿಚಾರದಲ್ಲಿ ಅಂದಿನ ಭಕ್ತಿ ಭಾವನೆಗಳು ಇಂದು ನಮ್ಮಲ್ಲಿರಲಿಕ್ಕಿಲ್ಲ. ಆ ವ್ಯತ್ಯಾಸದಿಂದ ಫಲಪದಗಳೂ ವ್ಯತ್ಯಾಸವಾಗುವುದು ಸ್ವಾಭಾವಿಕವಲ್ಲವೆ ? ಆದರೆ ಯಾರಿಗೆ ಅಂದಿನ ಭಕ್ತಿ ವಿಶ್ವಾಸಗಳೇ ಇಂದೂ ಇವೆಯೋ ಅವರು ಅಂದಿನ ಪ್ರಮಥ ಶ್ರೇಣಿಯಲ್ಲಿ ಸೇರಲು ಏಕೆ ತಾನೆ ಸಮರ್ಥರಾಗುವುದಿಲ್ಲ ? ಆಗೇ ಆಗುವರು.

ಅಂದಿನ ಶ್ರೀ ಸಿದ್ಧರಾಮ ಶಿವಯೋಗಿಗಳಂತೆ ಅಥಣಿ ಶ್ರೀ ಮುರುಘೇಂದ್ರ ಶಿವಯೋಗಿಗಳೂ ಯೋಗಗುಣ ಶೀಲಾಚಾರಿಗಳಾಗಿ ದ್ದರು. ಶ್ರೀ ಸಿದ್ಧರಾಮ ಶಿವಯೋಗಿಗಳು ಹೇಗೆ ಜಂಗಮಪುಂಗವ ರಾಗಿದ್ದರೋ ಹಾಗೆಯೇ ಈ ಶಿವಯೋಗಿಗಳೂ ಜಂಗಮವರೇಣ್ಯ ರಾಗಿದ್ದರು. ಆ ಹಿಂದಣ ಪ್ರಮಥರ ವಚನಗಳಲ್ಲಿ ಉಕ್ತವಾದ ಆಚಾರ ವಿಚಾರಗಳನ್ನೇ ಈ ಶಿವಯೋಗಿಗಳು ಹೇಗೆ ಅನುಸರಿಸಿ ಆಚರಿಸುತ್ತಿದ್ದರೆಂಬುದನ್ನು ಈ ಪುಸ್ತಕದ ಆರು ಪ್ರಕರಣಗಳಲ್ಲಿ ಸಂಕ್ಷಿಪ್ತವಾಗಿ ಉದಾಹರಿಸಿದ್ದಾಗಿದೆ. ಶ್ರೀ ಶಿವಯೋಗಿಗಳವರ

ಆಚರಣೆಗನುಗುಣವಾದ ಪ್ರಮಥರ ವಚನಗಳನ್ನು ಆಯಾಯ ಪ್ರಕರಣಗಳಲ್ಲಿ ಆಧಾರವಾಗಿ ಕೊಟ್ಟದ್ದಾಗಿದೆಯೇ ವಿನಾ ಪ್ರಮಥರ ವಚನಗಳಿಗನುಗುಣವಾಗಿ ಶಿವಯೋಗಿಗಳವರ ಚರಿತ್ರೆಯನ್ನು ಸರಿ ಪಡಿಸುವ ಅಸಂಗತ ಪ್ರಯತ್ನವನ್ನೇನೂ ಮಾಡಿಲ್ಲವೆಂಬುದು ವಾಚಕರಿಗೆ ಗೊತ್ತಾಗಬಹುದು.

ಶ್ರೀ ಶಿವಯೋಗಿಗಳವರು ನಿವೃತ್ತಿಪರರಾಗಿದ್ದವರು. ಆದುದರಿಂದ ಪ್ರವೃತ್ತಿಪರರ ಚಾರಿತ್ರ್ಯದಲ್ಲಿ ದೊರೆಯುವಂತೆ ಹೇರಳವಾದ ಪ್ರಸಂಗಗಳು ಈ ಮಹಾನುಭಾವರ ಚಾರಿತ್ರ್ಯದಲ್ಲಿ ದೊರೆಯುವುದು ಶಕ್ಯವಿಲ್ಲ. ಹೀಗಿದ್ದರೂ ಈ ಪರಮ ಪೂಜ್ಯರ ಸೇವೆಯಲ್ಲಿಯೇ ತಮ್ಮ ತನುವ ಸವಿಸಿದ ಮಹನೀಯರು ತಿಳಿಸಿದ ಸಂಗತಿಗಳನ್ನೂ ೧೦-೧೨ ವರುಷಗಳಲ್ಲಿ ಅನೇಕ ಸಾರೆ ಆ ಯೋಗಿವರೇಣ್ಯರ ದರ್ಶನಕ್ಕೆ ಪಾತ್ರನಾದಾಗ ನನಗೆ ತಿಳಿದ ಅನೇಕ ವಿಷಯಗಳನ್ನೂ ಆಯಾಯ ಪ್ರಕರಣಗಳಲ್ಲಿ ಉದಾಹರಿಸಿದ್ದಾಗಿದೆ.

ಶ್ರೀ ಶಿವಯೋಗಿಗಳವರ ಆ ಜನ್ಮಾಂತ್ಯದ ಚರಿತ್ರೆಯನ್ನೇನೂ ಈ ಪುಸ್ತಕದಲ್ಲಿ ಬರೆದಿಲ್ಲ. ಆ ಮಹಾತ್ಮರ ಮುಖ್ಯಾಚಾರಗಳನ್ನೂ, ಅವುಗಳ ಸಾಧನೆಗಾಗಿ ಮಾಡಿದ ಪ್ರಯತ್ನಗಳನ್ನೂ, ಅವುಗಳೆಲ್ಲಾ ಪ್ರಮಥರ ಆಚಾರಗಳಿಗೆ ಹೇಗೆ ಸಂಬಂಧವಾಗಿದ್ದವೆಂಬುದನ್ನೂ ಮಾತ್ರ ವಿವರಿಸಿದ್ದಾಗಿದೆ. ಆದುದರಿಂದ ಶ್ರೀ ಶಿವಯೋಗಿಗಳು ಪ್ರಮಥಾಚಾರಗಳ ದಿವ್ಯಜ್ಯೋತಿಯಾಗಿದ್ದರೆಂದೇ ಸ್ಪಷ್ಟವಾಗದಿರಲಾರದು.

ಯಾರು ಯೋಗಗುಣ ಶೀಲಾಚಾರಿಗಳೋ ಮತ್ತು ಜಂಗಮ ಮಾರ್ಗಾವಲಂಬಿಗಳೋ ಅವರಿಗೆ ಈ ಪುಸ್ತಕವು ಮಾರ್ಗದರ್ಶಿಯಾಗುವುದು. ಇತರರಿಗೆ ತಮ್ಮ ಗುಣ ಶೀಲಾಚಾರಗಳಿಗೆ ಯುಕ್ತ

ವಾಗಿದ್ದುದನ್ನೇ ತಾವು ಈ ಮಹಾತ್ಮರಂತೆ ದೃಢನಿಷ್ಠೆಯಿಂದಾಚರಿಸಿದರೆ ತಮ್ಮ ಇಷ್ಟವೂ ಸಾಧ್ಯವಾಗುವುದೆಂಬ ವಿಶ್ವಾಸವನ್ನುಂಟ್ಮು ಮಾಡಬಹುದು. ಆದುದರಿಂದ ಆ ಮಹಾ ಶಿವಯೋಗಿಗಳವರ ದಿವ್ಯ ಚಾರಿತ್ರ್ಯಕ್ಕೆ ಮುಖ್ಯ ಕಾರಣವಾದ ಶ್ರೀ ಬಸವಾದಿ ಪ್ರಮಥರು ನಡೆದು ನುಡಿದು ತೋರಿಸಿದ ಆಚಾರ ವಿಚಾರಗಳ ಕಡೆಗೆ ಸಕಲ ವೀರಶೈವರೂ ಇನ್ನು ಮೇಲಾದರೂ ತಿರುಗಲೆಂದು ಹಾರೈಕೆ.

ಶಿವರಾತ್ರಿ (ತಾ. ೩-೩-೩೫)
ವೀರಶೈವ ವಿದ್ಯಾಲಯ

ಹರ್ಡೇಕರ ಮಂಜಪ್ಪ

# ಒ ಳ ಪು ಟ

*

॥ ಶ್ರೀ ಬಸವಲಿಂಗಾಯ ನಮಃ ॥

## ೧ ನೆಯ ಪ್ರಕರಣ

# ಆದ್ಯರ ವಚನ ಪರುಷ ಕಂಡಯ್ಯಾ

❋

ಅಥಣಿಯ ಗಚ್ಚಿನಮಠದಲ್ಲಿ ಶ್ರೀ ಗುರುಶಾಂತ ಸ್ವಾಮಿಗಳೆಂಬ ಪರಮ ಪೂಜ್ಯ ಯತಿಗಳಿದ್ದರು. ಆ ಮಹಾನುಭಾವರೇ ಶ್ರೀ ಮುರುಘೇಂದ್ರ ಶಿವಯೋಗಿಗಳವರ ಗುರುಗಳು. ಶಿವಯೋಗಿಗಳವರು ತಮ್ಮ ಗುರುಗಳ ಅಪ್ಪಣೆಯ ಪ್ರಕಾರ ವಿದ್ಯಾಭ್ಯಾಸ ಮಾಡಿ ಗುರುಸೇವಾ ತತ್ಪರರಾಗಿ ಆ ಗುರುಗಳ ಅನುಗ್ರಹದಿಂದ ತಮ್ಮ ೨೦ ನೆಯ ವರುಷದಲ್ಲಿ ಜಂಗಮಾಶ್ರಮವನ್ನು ಹೊಂದಿದರು.

ಜಂಗಮ ದೀಕ್ಷೆಯನ್ನು ಹೊಂದುವಾಗ ಕರಣಹಸಿಗೆ, ಮಿಶ್ರಾರ್ಪಣ ಮೊದಲಾದ ವಚನ ಗ್ರಂಥಗಳನ್ನು ಗುರುಗಳು

ಜಂಗಮ ಮೂರ್ತಿಗಳಿಗೆ ಆಶೀರ್ವದಿಸುವ ಪದ್ಧತಿಯಿದೆಯಷ್ಟೇ. ಅದೇ ಪ್ರಕಾರ ಶಿವಯೋಗಿಗಳವರಿಗೂ ಅವರ ಗುರುಗಳು ವಚನ ಗ್ರಂಥಗಳನ್ನು ಆಶೀರ್ವದಿಸಿದ್ದರು. ಅವುಗಳಲ್ಲಿ ಶಿವಯೋಗಿಗಳಿಗೆ ಬಹು ಭಕ್ತಿ ವಿಶ್ವಾಸಗಳಿದ್ದುದರಿಂದ ಅವುಗಳನ್ನು ಯಾವಾಗಲೂ ಓದುತ್ತಿದ್ದರು.

ಶ್ರೀ ಬಸವಣ್ಣನವರ ವಚನಗಳ ವಿಷಯದಲ್ಲಿ ಶಿವಯೋಗಿಗಳವರಿಗೆ ವಿಶೇಷವಾದ ಭಕ್ತಿ ವಿಶ್ವಾಸಗಳಿದ್ದವು. ಬಸವ ಸ್ವಾಮಿಯು ಮಂತ್ರ ಮೂರ್ತಿಯಾಗಿದ್ದುದರಿಂದ ಅವರು 'ಬಸವಣ್ಣನವರ ವಚನ' ಎಂದು ನಮ್ಮಂತೆ ಹೆಸರಿಟ್ಟು ಹೇಳುತ್ತಿರಲಿಲ್ಲ. 'ಅಪ್ಪನವರ ವಚನ' ಎಂದು ನುಡಿಯುತ್ತಿದ್ದರು.

ಆ ಎಲ್ಲಾ ವಚನಗಳನ್ನೂ ಸ್ವಂತಾಕ್ಷರಗಳಿಂದ ಬರೆದುಕೊಂಡಿಟ್ಟಿದ್ದರು. ಅಪ್ಪನವರ ವಚನ ಪುಸ್ತಕವು ತಮ್ಮ ಹತ್ತಿರವೇ ಇರಬೇಕು. ತಾವು ಯಾವ ಸ್ಥಳಕ್ಕೆ ಹೊರಡುವುದಾದರೂ ಅದು ತಮ್ಮ ಸಂಗಡ ಮೊದಲು ಇರಲೇ ಬೇಕು. ಮಧ್ಯಾಹ್ನ ೧ ಗಂಟೆಯ ಸಮಯದಲ್ಲಿ ಮತ್ತು ರಾತ್ರಿ ಪವಡಿಸುವ ಮುಂಚೆ ಅಪ್ಪನವರ ವಚನಗಳನ್ನು ಕ್ರಮದಿಂದ ಓದಲೇ ಬೇಕಾದುದು ನಿತ್ಯಾಚಾರವಾಗಿದ್ದಿತು. ಆ ಸಮಯ ವಚನ ಪಾಠಕ್ಕೆ ಮೀಸಲಾಗಿಯೇ ಇರುತ್ತಿದ್ದಿತು. ಇದು ಶಿವಯೋಗಿಗಳು **ವಚನ ನೋಡುವ ಕಾಲ** ಎಂಬುದು ಎಲ್ಲರಿಗೂ ತಿಳಿದ ಸಂಗತಿಯು.

ಆ ವಚನ ಪುಸ್ತಕವನ್ನು ನೆಲದ ಮೇಲಿಡದೆ ತಮ್ಮ ತೊಡೆಯ ಮೇಲೆಯೇ ಇಟ್ಟುಕೊಂಡು ಅದನ್ನು ನಿಧಾನವಾಗಿ ಬಿಚ್ಚಿ ಬಹು ಪೂಜ್ಯ ಭಾವದಿಂದ ಮಸ್ತಕಕ್ಕೆ ಮುಟ್ಟಿಸಿ ಅತಿ ಮೆಲ್ಲಗೆ ಓದುತ್ತಿದ್ದರು. ಪಿಂಡಸ್ಥಲದಿಂದ ಜ್ಞಾನಶೂನ್ಯಸ್ಥಲದ ವರೆಗೆ ಕ್ರಮದಿಂದ ಕ್ಲುಪ್ತವಾದ

ಕಾಲದ ವರೆಗೆ ಓದಿ ಮುಗಿಸುತ್ತಿದ್ದರು. ಒಮ್ಮೆ ಮುಗಿದ ನಂತರ ಪುನಃ ಆರಂಭದಿಂದ ಓದುತ್ತ ನೂರಾರು ಸಾರಿ ಮುಗಿಸಿರಬಹುದು.

ಆ ಅಪ್ಪನವರ ವಚನ ಪುಸ್ತಕವನ್ನು ಬಿಚ್ಚುವುದು ಮತ್ತು ಕಟ್ಟುವುದು ಇವು ತಾವೇ ಮಾಡತಕ್ಕ ಕೆಲಸಗಳಾಗಿದ್ದವು. ಆ ಪುಸ್ತಕಕ್ಕೆ ನಾಲ್ಕಾರು ಒಳ್ಳೆಯ ಬಟ್ಟೆಗಳನ್ನು ಬಹು ಹೊಂದಿಕೆಯಾಗಿ ಕಟ್ಟುತ್ತಿದ್ದರು. ಈ ವಚನಾನುಭವದ ಪವಿತ್ರಾಚರಣೆಯು ಈ ಪ್ರಕಾರ ೪೦-೫೦ ವರುಷ ಅವಿಚ್ಛಿನ್ನವಾಗಿ ನಡೆದಿದ್ದಿತು.

ಶ್ರೀ ಬಸವಣ್ಣನವರ ವಚನಗಳಲ್ಲಿ ಶ್ರೀ ಶಿವಯೋಗಿಗಳವರಿಗೆ ಹೀಗೆ ಅಪಾರವಾದ ಭಕ್ತಿಯಿದ್ದುದೇಕೆ ? ಮಹಾಶಿವಾನುಭವಿಗಳಾಗಿದ್ದ ಇಳಕಲ್ಲಿನ ಶ್ರೀ ಮಹಂತ ಶಿವಯೋಗಿಗಳೂ ಇದೇ ಪ್ರಕಾರ ಬಸವಣ್ಣನವರ ವಚನಗಳಲ್ಲಿ ವಿಶೇಷವಾದ ನಿಷ್ಠೆಯುಳ್ಳವರಾಗಿದ್ದರು. ತಾವು ಎಲ್ಲಿಗಾದರೂ ಹೊರಡುವಾಗ ಆ ವಚನಪುಸ್ತಕವನ್ನು ತಮ್ಮ ಬೆನ್ನಿಗೆ ಕಟ್ಟಿಕೊಂಡೇ ಹೊರಡುತ್ತಿದ್ದರು. ಜಂಗಮ ಸಂಸ್ಕಾರ ಹೊಂದಿದನಂತರ ವಚನ ಗ್ರಂಥಗಳನ್ನು ಅವರಿಗರ್ಪಿಸುವುದು ಒಂದು ಧಾರ್ಮಿಕ ಕ್ರಿಯೆಯಾಗಿಯೇ ಇದೆಯಷ್ಟೆ. ಈ ಪ್ರಕಾರ ವಚನಗ್ರಂಥಗಳನ್ನು ಕೊಡುವುದೇಕೆ ? ಮತ್ತು ಅವುಗಳಲ್ಲಿ ಅತ್ಯಧಿಕವಾದ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ಬಹು ಕಾಲದಿಂದಲೂ ಅನೇಕ ಪರಮ ಪೂಜ್ಯರು ಅವುಗಳನ್ನೇ ತಮ್ಮ ಮಾರ್ಗದರ್ಶಿಯಾಗಿಟ್ಟು ಕೊಂಡಿರುವುದೇಕೆ ?

ಶಿವಪೂಜೆ ಮಾಡುವುದು ಮತ್ತು ಶಿವಪ್ರಸಾದ ಸೇವಿಸುವುದು ಹೇಗೆ ನಿತ್ಯಕರ್ಮಗಳಾಗಿವೆಯೋ ಹಾಗೆಯೇ ಶಿವಾನುಭವ ಗೋಷ್ಠಿಯೂ ನಿತ್ಯಾಚಾರವಾಗಿಯೇ ಇದೆ. ಪ್ರಮಥರ ವಚನಾನುಭವವಾದರೋ ಆ ಶಿವಾನುಭವದ ಮುಖ್ಯಾಂಶವು. ಮನಸ್ಸಿನ ಚಾಂಚಲ್ಯವನ್ನು ಕಳೆಯಲಿಕ್ಕೂ, ಬುದ್ಧಿಯ ಸಂಶಯವನ್ನು ನಿವಾರಣೆ

ಮಾಡಲಿಕ್ಕೂ, ಭಾವದ ಬೆಳಕನ್ನು ಹೆಚ್ಚಿಸಲಿಕ್ಕೂ, ಪ್ರಮಥರ ವಚನಗಳೇ ಬಹು ಪರಿಣಾಮಕಾರಿಯಾದವುಗಳಾಗಿವೆ.

ಈ ವಚನಗಳು ಆತ್ಮೋನ್ನತಿಗೆ ಸಾಧನಗಳಾಗಿರುವಂತೆಯೇ ಅನ್ಯರ ಸಂಶಯಾದಿಗಳನ್ನು ನಿವಾರಣೆ ಮಾಡಿ ನಿಜ ಜ್ಞಾನವನ್ನುಂಟು ಮಾಡಿಕೊಡಲು ಕೂಡಾ ಪ್ರಬಲ ಶಾಸ್ತ್ರಸಿದ್ಧಾಂತಗಳಾಗಿಯೇ ಇವೆ. ವೇದ, ಆಗಮ, ಉಪನಿಷತ್ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿಯ ಸಾರಭೂತವಾದ ಅನೇಕ ಸತ್ಯ ಸಿದ್ಧಾಂತಗಳು ಪ್ರಮಥರ ಸ್ವಾನುಭವದ ಈ ವಚನಗಳಲ್ಲಿ ವಿಶೇಷ ತೇಜೋಮಯವಾಗಿ ಪ್ರಕಾಶಿಸುತ್ತವೆ. ಮತ್ತು ಆಧ್ಯಾತ್ಮಿಕ ಪ್ರಪಂಚದಲ್ಲಿ ಪ್ರಮಥರು ಸ್ವಾನುಭವದಿಂದ ಕಂಡು ಹಿಡಿದ ಅನೇಕ ನೂತನ ಸಿದ್ಧಾಂತಗಳೂ ಅವರ ವಚನಗಳಿಂದಲೇ ಗೊತ್ತಾಗುತ್ತದೆ.

ಜಂಗಮಸ್ವಾಮಿಗಳಿಗಾದರೂ, ವೀರಶೈವಧರ್ಮರಕ್ಷಣೆ ಮತ್ತು ಪ್ರಸಾರಣೆಗಳೇ ಅವರ ಶ್ವಾಸಕೋಶಗಳು. ಎಂದ ಮೇಲೆ ಪ್ರಮಥರ ವಚನಗಳನ್ನು ಅವರು ಪ್ರಾಣಸ್ವರೂಪವಾಗಿಯೇ ತಿಳಿಯಬೇಕಾದುದು ವಿಹಿತವಷ್ಟೆ. ಅದಕ್ಕೋಸ್ಕರವಾಗಿಯೇ ಜಂಗಮಾಶ್ರಮ ಸ್ವೀಕರಿಸಿದೊಡನೆ ಪ್ರಮಥರ ವಚನಪುಸ್ತಕಗಳನ್ನು ಕೊಡುವ ಪದ್ಧತಿಯುಂಟಾಗಿದೆ. ಅನೇಕ ಪರಮ ಪೂಜ್ಯರು ಅವುಗಳನ್ನು ತಮ್ಮ ಪ್ರಾಣದಂತೆ ಜೋಕೆಮಾಡಿ ಅವುಗಳಿಂದಲೇ ತಮ್ಮ ನಡೆನುಡಿಗಳನ್ನು ತಿದ್ದಿಕೊಂಡು ತಾವು ಲೋಕವಂದ್ಯರಾದುದಲ್ಲದೆ ವೀರಶೈವ ಮತವನ್ನೂ ಉರ್ಜಿತ ಸ್ಥಿತಿಗೆ ತಂದರು.

ಮಹಾನುಭಾವರಾದ ಬಸವಣ್ಣನವರು ಪ್ರಮಥರ ವಚನಗಳಿಗೆ ಎಷ್ಟು ಮಹತ್ವವನ್ನು ಕೊಟ್ಟಿದ್ದಾರೆಂಬುದು ಈ ಕೆಳಗಿನ ಅವರ ವಚನಗಳಿಂದಲೇ ಸ್ಪಷ್ಟವಾಗುತ್ತದೆ.

ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು
ತವರಾಜ ನೊರೆತೆರೆಯಂತೆ ಆದ್ಯರ ವಚನವಿರಲು ಬೇರೆ
ಬಾವಿಯ ತೋಡಿ ಉಪ್ಪನೀರ ಉಂಬುವವನ ವಿಧಿಯಂತೆ
ಆಯಿತ್ತೆನ್ನ ಮತಿ ಕೂಡಲ ಸಂಗಮದೇವಾ.

ಸಂಸಾರ ತಾಪದಿಂದ ಬಳಲಿ ಬಾಯಾರಿದವರಿಗೆ ಪ್ರಮಥರ ವಚನವೆಂಬುದೇ ಹಾಲಿನ ಹೊಳೆ. ಆ ಹೊಳೆಯ ಹತ್ತಿರಿರುವ ಕೆಸರಾದರೋ ಬೆಲ್ಲ. ದಂಡೆಯಲ್ಲಿರುವ ಉಸುಕಾದರೋ ಸಕ್ಕರೆ. ಆ ಹೊಳೆಯಲ್ಲಿರುವ ನೊರೆತೆರೆಗಳು ಅಮೃತ. ಹೀಗಿರುವ ವಚನಾಮೃತವನ್ನು ಸೇವಿಸಿ ಎಂದೂ ಬಾಯಾರಿಕೆಯಾಗದಂತೆ ಮಾಡಿಕೊಳ್ಳದೆ ಬಾವಿಯನ್ನು ತೋಡಿ ಉಪ್ಪ ನೀರನ್ನು ತೆಗೆದು ಕುಡಿಯಬಹುದೆ? ಪ್ರಮಥರ ವಚನಗಳನ್ನು ಬಿಟ್ಟು ವೇದ, ಆಗಮ, ಉಪನಿಷತ್ತು, ಪುರಾಣಾದಿಗಳನ್ನೆಲ್ಲಾ ಓದಿ ನಿಜ ತತ್ವಗಳನ್ನು ಶೋಧಿಸಿ ಶಾಂತನಾಗಬೇಕೆಂಬುದು ಬಾವಿಯನ್ನು ತೋಡಿ ಉಪ್ಪುನೀರನ್ನು ಹೊಂದುವಂತೆಯೇ ಸರಿ.

ಆದ್ಯರ ವಚನ ಪರುಷಕಂಡಯ್ಯಾ,ಸದಾಶಿವನೆಂಬ ಲಿಂಗವ
ನಂಬುವದು. ನಂಬಲೊಡನೆ ನೀ ವಿಜಯ ಕಂಡಯ್ಯಾ.
ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಕೂಡಲಸಂಗನ ಶರಣರ
ವಚನ ಬೇವ ಸವಿದಂತೆ.

ಮನಸ್ಸೆಂಬ ಕಬ್ಬಿಣಕ್ಕೆ ಪ್ರಮಥರ ವಚನವು ಪರುಷದಂತೆ. ಅದು ಮನಸ್ಸಿನ ಮಲಿನತ್ವವನ್ನೆಲ್ಲಾ ತೊಳೆದು ಬಂಗಾರದಂತೆ ಶುದ್ಧಗೊಳಿಸುತ್ತದೆ. ಬೇವು ಬಾಯಲ್ಲಿ ಕಹಿಯಾಗಿದ್ದರೂ ಹೊಟ್ಟೆಯೊಳಗಿನ ಹುಳಗಳನ್ನೆಲ್ಲಾ ಕೊಂದು ಹೇಗೆ ಆರೋಗ್ಯವನ್ನು ಕೊಡುತ್ತದೆಯೋ ಹಾಗೆಯೇ ಪ್ರಮಥರ ವಚನಗಳಲ್ಲಿ ಸತ್ಯ ನಿರ್ದಾ

ಕ್ಲಿಷ್ಟ್ಯಗಳ ಹೊಳಪಿರುವುದರಿಂದ ನಡೆಯಲು ಕಷ್ಟವಾಗಿಯೂ ಕೇಳಲು ಕಟುವಾಗಿಯೂ ಇದ್ದರೂ ಅವುಗಳನ್ನು ಆದರದಿಂದ ಕೇಳಿ ಅವುಗಳಂತೆ ನಡೆದರೆ ಮನಸ್ಸಿನ ನಾನಾ ಕುಕಲ್ಪನೆಗಳೆಂಬ ಕ್ರಿಮಿಗಳೆಲ್ಲಾ ನಾಶವಾಗಿ ಭವರೋಗವೂ ನಿವಾರಣೆಯಾಗುತ್ತದೆ.

ಪ್ರಮಥರ ವಚನಗಳಲ್ಲಿ ಇಂತಹ ಸತ್ಯ ಸಿದ್ಧಾಂತ ಮತ್ತು ಸಾಮರ್ಥ್ಯಗಳಿರುವುದರಿಂದಲೇ ಶ್ರೀ ಸಿದ್ಧರಾಮ ಶಿವಯೋಗಿಗಳು ಹೀಗೆ ಹೇಳಿದ್ದಾರೆ.

> ಎಮ್ಮ ವಚನದೊಂದು ಪಾರಾಯಣಕ್ಕೆ ವ್ಯಾಸನದೊಂದು ಪುರಾಣ ಸರಿಬಾರದಯ್ಯಾ. ನಮ್ಮ ವಚನದ ನೂರೆಂಟರ ಧ್ಯಯನಕ್ಕೆ ಶತರುದ್ರಿಯಾದಿ ಸಮಬಾರದಯ್ಯಾ. ಎಮ್ಮ ವಚನದ ಸಾಸಿರ ಪಾರಾಯಣಕ್ಕೆ ಗಾಯತ್ರಿ ಲಕ್ಷ ಜಪ ಸಮಬಾರದಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಬೇರೆ ಪುರಾಣಪಾರಾಯಣಾದಿಗಳಿಗಿಂತ ಪ್ರಮಥರ ವಚನಗಳಲ್ಲಿರುವ ಮಹತ್ವವು ಆ ಸಿದ್ಧರಾಮ ಶಿವಯೋಗಿಗಳಿಗೆ ಎಷ್ಟು ಹೆಚ್ಚಿನದಾಗಿ ತೋರಿದ್ದಿತೆಂಬುದು ಮೇಲಣ ವಚನದಿಂದ ಗೊತ್ತಾಗುವುದಿಲ್ಲವೆ ? ಆದುದರಿಂದ ಹೀಗೆ ಹೇಳಿದ್ದಾರೆ.

> ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೇ ಇಷ್ಟವಯ್ಯಾ. ಸ್ಮೃತಿಗಳು ಸಮುದ್ರ ಪಾಲಾಗಲಿ. ಶ್ರುತಿಗಳು ವೈಕುಂಠ ಸೇರಲಿ. ಪುರಾಣಗಳು ಅಗ್ನಿಯ ಸೇರಲಿ. ಆಗಮಗಳು ವಾಯುವ ಹೊಂದಲಿ. ಎಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ಮಹಾಲಿಂಗ ಹೃದಯದೊಳು ಗ್ರಂಥಿಯಾಗಿರಲಿ.

ವೇದಾಗಮಪುರಾಣಗಳಿಗಿಂತಲೂ ಪುರಾತನರ ವಚನಗಳೇ ವೀರಶೈವರ ನಡೆನುಡಿಗಳನ್ನು ತಿದ್ದಲು ಮುಖ್ಯ ಸಾಧನಗಳಾಗಿವೆ ಯೆಂತಲೂ ಆದುವರಿಂದ ಅನ್ಯ ಗ್ರಂಥಗಳ ಕಡೆಗೆ ಲಕ್ಷಿಸದೆ ವಚನ ಗಳನ್ನೇ ತಮ್ಮ ಹೃದಯದಲ್ಲಿಟ್ಟುಕೊಂಡು ಅವುಗಳಲ್ಲಿ ಹೇಳಿರು ವಂತೆಯೇ ನಡೆಯಬೇಕೆಂತಲೂ ಸಿದ್ಧರಾಮ ಶಿವಯೋಗಿಗಳು ಮೇಲಣ ವಚನವಲ್ಲಿ ಸೂಚಿಸಿದ್ದಾರಷ್ಟೆ.

ಶ್ರೀ ಬಸವಾದಿ ಪ್ರಮಥರ ಕಾಲದಿಂದ ಹತ್ತೊಂಬತ್ತನೆಯ ಶತಮಾನದ ಮಧ್ಯದ ವರೆಗೂ ವಚನಗಳ ಪ್ರಚಾರವು ಇದ್ದೇ ಇದ್ದಿತು. ಗುರುಜಂಗಮರು ಇವುಗಳನ್ನು ಬಹು ಪೂಜ್ಯ ಭಾವನೆಯಿಂದ ಓದುತ್ತ ಅವುಗಳ ಮೂಲಕ ತಮ್ಮ ನಡೆನುಡಿಗಳನ್ನು ತಿದ್ದಿಕೊಂಡು ಭಕ್ತರಲ್ಲಿಯೂ ಪ್ರಸಾರ ಮಾಡುತ್ತಿದ್ದರು. ಭಕ್ತರಲ್ಲಿಯೂ ಅಸಂಖ್ಯ ಜನರು ಬಸವಣ್ಣನವರ ವಚನಗಳನ್ನು ನಿತ್ಯ ಪಾರಾಯಣ ಮಾಡು ತ್ತಿದ್ದರು. ಈ ಪ್ರಕಾರ ವಚನಗಳ ಪ್ರಚಾರವಿದ್ದಾಗ ಸಮಾಜದಲ್ಲಿ ಧರ್ಮವೂ ಜಾಗೃತವಾಗಿಯೇ ಇದ್ದಿತು.

ಕಳೆದ ೭೦-೮೦ ವರುಷಗಳಿಂದ ಈ ಸ್ಥಿತಿಯು ಬೇರೆಯಾಗುತ್ತ ಬಂದಿತು. ಗುರುಜಂಗಮರು ಸಂಸ್ಕೃತ ವಿದ್ಯಾಭ್ಯಾಸದ ಕಡೆಗೇನೇ ದಿನೇ ದಿನೇ ಹೆಚ್ಚು ಲಕ್ಷಿಸಿದರು. ಸಂಸ್ಕೃತ ಪಾಂಡಿತ್ಯವೇ ಅವರ ಪೂಜ್ಯತೆಗೆ ಹೆಗ್ಗುರುತಾಯಿತು. ಆದುದರಿಂದ ಪ್ರಮಥರ ವಚನಗಳ ಕಡೆಗೆ ಉಪೇಕ್ಷೆ ಹೆಚ್ಚಾಯಿತು. ಪ್ರಮಥರ ಆಚಾರವಿಚಾರಗಳ ಅರುವು ಕಡಿಮೆಯಾಯಿತು. ಮತಪರಿವರ್ತನೆಯ ಮತಿ ತಲೆ ದೋರಿತು.

ಅಥಣಿಯ ಶ್ರೀ ಶಿವಯೋಗಿಗಳವರು ಈ ಅನರ್ಥದ ಆಘಾತಕ್ಕೆ ಸಿಕ್ಕಿದವರಲ್ಲ. ಅವರು ಪ್ರಮಥರ ಪದ್ಧತಿಯನ್ನೇ ಅನುಸರಿಸಿ

ವಚನಗಳಲ್ಲಿಯೇ ದೃಢತರವಾದ ವಿಶ್ವಾಸವನ್ನಿಟ್ಟುಕೊಂಡು ಅವುಗಳಲ್ಲಿಯ ತತ್ವಗಳಂತೆಯೇ ತಮ್ಮ ನಡೆನುಡಿಗಳನ್ನು ತಿದ್ದಿಕೊಂಡವರು. ಆ ಮಹಾತ್ಮರಲ್ಲಿ ಅಂತಹ ದಿವ್ಯ ಶಕ್ತಿ, ಆಚಾರವಿಚಾರಗಳುಂಟಾಗಲು ಪ್ರಮಥರ ವಚನಾನುಭವವೇ ಮೂಲ ಕಾರಣವಾಯಿತೆಂದು ಧಾರಾಳವಾಗಿ ಹೇಳಬಹುದು. ಇತ್ತೀಚೆಗೆ ವಚನಗಳ ವಿಷಯದಲ್ಲಿ ಪ್ರೇಮಾದರಗಳುಂಟಾಗಲಾರಂಭವಾಗಿವೆ. ಅಂತಹ ವಚನ ಪ್ರೇಮಿಗಳಿಗೆ ಶಿವಯೋಗಿಗಳವರ ಈ ದಿವ್ಯಾಚರಣೆಯು ಹೆಚ್ಚಾದ ವಿಶ್ವಾಸ ಮತ್ತು ಉತ್ಸಾಹಗಳನ್ನುಂಟು ಮಾಡಲಿಕ್ಕಿಲ್ಲವೆ ?



೨ ನೆಯ ಪ್ರಕರಣ

# ಬೇಕು ಬೇಡೆಂಬುವಿಲ್ಲ

*

ಶ್ರೀ ಶಿವಯೋಗಿಗಳವರು ವಚನಾನುಭಾವಿಗಳಾಗಿದ್ದುದರಿಂದ ಆ ವಚನಗಳಲ್ಲಿಯ ತತ್ವಗಳು ಸ್ವಾಭಾವಿಕವಾಗಿಯೇ ಅವರ ನಡೆ ನುಡಿಗಳಲ್ಲಿ ಒಡಮೂಡಿದವು. ನಾವು ಯಾವ ವಿಧವಾಗಿ ನಮ್ಮ ಮನ ಬುದ್ಧಿಗಳಿಗೆ ಶಿಕ್ಷಣವನ್ನು ಕೊಡುತ್ತೇವೆಯೋ ಅದೇ ಪ್ರಕಾರ ಅವು ರೂಪುಗೊಳ್ಳುವುದು ಸ್ವಾಭಾವಿಕವಷ್ಟೆ.

ಪ್ರಮಥರ ವಚನಗಳನ್ನು ಓದಲುಪಕ್ರಮಿಸಿದೊಡನೆ ಅವು ನಮಗೆ ನಮ್ಮ ಕರ್ತವ್ಯದ ಅರುವನ್ನುಂಟು ಮಾಡಿಕೊಡುತ್ತವೆ. ಪುರಾತನರನ್ನು ಕೇವಲ ನೆನೆಸಿದ ಮಾತ್ರದಿಂದ ನಮ್ಮ ಉನ್ನತಿ ಯಾಗುವುದಿಲ್ಲವೆಂತಲೂ ಅವರು ಬೋಧಿಸಿದಂತೆ ನಿಷ್ಠೆಯಿಂದ ನಾವು ನಡೆದಾಗಲೇ ನಮ್ಮ ಉನ್ನತಿಯಾಗುವುದೆಂತಲೂ ಅವು ನಮಗೆ ಎಚ್ಚರಿಕೆಯನ್ನು ಕೊಡುತ್ತವೆ. ಪ್ರಮಥ ಪುಂಗವರಾದ ಶ್ರೀ ಬಸವಣ್ಣ ನವರು ಈ ಪ್ರಕಾರ ಸ್ಪಷ್ಟವಾಗಿ ಲೋಕಕ್ಕೆ ಎಚ್ಚರಿಕೆಯನ್ನು ಕೊಟ್ಟಿದ್ದಾರೆ.

**ಕೆಂಚ ಕರಿಕನ ನೆನೆದಡೆ ಕರಿಕನಾಗಬಲ್ಲನೆ ? ಕರಿಕ ಕೆಂಚನ ನೆನೆದಡೆ ಕೆಂಚನಾಗಬಲ್ಲನೆ ? ದರಿದ್ರ ಸಿರಿವಂತನ ನೆನೆದಡೆ ಸಿರಿವಂತನಾಗಬಲ್ಲನೆ ? ಸಿರಿವಂತ ದರಿದ್ರನ ನೆನೆದಡೆ ದರಿದ್ರನಾಗಬಲ್ಲನೆ ? ಮುನ್ನಿನ ಪುರಾತನರ**

ನೆನೆದು ಧನ್ಯರಾದಿಹೆವೆಂಬ ಮಾತಿನ ರಂಜಕರನೇನೆಂಬೆ
ಕೂಡಲ ಸಂಗಮದೇವಾ ?

ಪ್ರಮಥ ವರೇಣ್ಯರಾದ ಶ್ರೀ ಪ್ರಭುದೇವರು ಕೂಡಾ "ಪುರಾತನರ ನೆನೆದು ಕೃತಾರ್ಥರಾದೆವೆಂಬರು. ತಮ್ಮಲ್ಲಿ ಭಕ್ತಿ ನಿಷ್ಠೆ ಇಲ್ಲದವರ ಕಂಡಡೆ ಮೆಚ್ಚ ನಮ್ಮ ಗುಹೇಶ್ವರ" ಎಂದು ಹೇಳಿದ್ದಾರೆ. ಎಂದ ಮೇಲೆ ಶ್ರೀ ಶಿವಯೋಗಿಗಳಂತಹ ತೇಜೋ ಮೂರ್ತಿಗಳು ಈ ವಚನಗಳನ್ನೆಲ್ಲಾ ಓದಿ ತಾವು ಅವುಗಳಂತೆ ಆಚರಿಸಲು ಪ್ರಯತ್ನಿಸದೆ ಬಿಡುವರೇ ? ತಮ್ಮ ಗುಣ ಶೀಲಾಚಾರ ಗಳಿಗೆ ಅನುಕೂಲವಾಗಿರುವ ಪ್ರಮಥರಾಚಾರಗಳನ್ನೆಲ್ಲ ಒಂದೊಂದಾ ಗಿಯೇ ಆಚರಿಸಿ ಅಳವಡಿಸಿಕೊಳ್ಳಲಾರಂಭಿಸಿದರು.

ಶ್ರೀ ಶಿವಯೋಗಿಗಳವರು ವೀರಶೈವ ಸಿದ್ಧಾಂತದ ಪ್ರಕಾರ ಜಂಗಮತ್ವವನ್ನನುಸರಿಸಿ ಆಚರಿಸಿದ ಜಂಗಮ ಪುಂಗವರು. ಜಂಗಮತ್ವಕ್ಕೆ ಸ್ವಯ, ಚರ ಮತ್ತು ಪರ ಎಂಬ ಮೂರು ಅವಸ್ಥೆ ಗಳಿವೆ. ಜಂಗಮರು ಅಥವಾ ವಿರಕ್ತರೆಂಬುವವರು ಬೇರೆ ಮತೀಯರಲ್ಲಿರತಕ್ಕ ಸನ್ಯಾಸಿಗಳಂತೆಯೇ ಸರಿಯೆಂದು ಅನೇಕರು ತಿಳಿದುಕೊಂಡಿರುವುದುಂಟು. ಅದು ಶುದ್ಧ ತಪ್ಪು. ಅನ್ಯ ಮತೀಯರ ಸನ್ಯಾಸಿಗಳಿಗೂ ವೀರಶೈವರಲ್ಲಿಯ ವಿರಕ್ತರಿಗೂ ಮಹದಂತರವಿದೆ. ಈ ವ್ಯತ್ಯಾಸ ತಿಳಿಯದಿದ್ದುದರಿಂದ, ವಿರಕ್ತರು ಸನ್ಯಾಸಿಗಳು, ಅವರು ಊರಲ್ಲೇಕಿರಬೇಕು ? ಮನೆಗಳಿಗೇಕೆ ಬರಬೇಕು ? ಲಗ್ನಾದಿ ಶುಭ ಕಾರ್ಯಗಳಲ್ಲಿ ಅವರೇಕಿರಬೇಕು ? ಹೀಗೆ ಅನೇಕ ಪ್ರಶ್ನೆಗಳನ್ನು ಮಾಡುತ್ತಿದ್ದಾರೆ.

ವೀರಶೈವ ಮತತತ್ವಗಳಲ್ಲಿ ಜಂಗಮವೂ ಒಂದಾಗಿದೆ. ಗುರು ಮತ್ತು ಲಿಂಗ ಹೇಗೆ ಅಗತ್ಯವಾಗಿವೆಯೋ ಹಾಗೆಯೇ ಜಂಗಮವೂ

ಅವಶ್ಯಕವಾಗಿಯೇ ಇದೆ. ಆದರೆ ಆ ಜಂಗಮತ್ವದ ಅಂತಸ್ತುಗಳ ತಾರತಮ್ಯದಂತೆ ಕಾರ್ಯ ಕ್ರಮಗಳೂ ಬೇರೆ ಬೇರೆಯಾಗಿರುತ್ತವೆ.

ಜಂಗಮತ್ವವು ಮೊದಲು ಸ್ವಯದಲ್ಲಿ ಪ್ರಾರಂಭವಾಗುತ್ತದೆ. ಎಂದರೆ ತಾಯಿ ತಂದೆ ಮೊದಲಾದವರ ರಕ್ತ ಸಂಬಂಧವಾಗಲಿ ಇಲ್ಲವೆ ಅವರ ಕುಲ ಕಸಬು ಮೊದಲಾದವುಗಳ ಸಂಬಂಧವಾಗಲಿ ಮನಸ್ಸಿನಲ್ಲಿ ಕೂಡಾ ಇಲ್ಲದೆ ಗುರು ಸೇವೆಯಲ್ಲಿದ್ದು ಬ್ರಹ್ಮಚರ್ಯ ವ್ರತವನ್ನಾ ಚರಿಸುತ್ತ ಮತ ಸಂಬಂಧವಾದ ಸಕಲ ಕರ್ಮಗಳಲ್ಲಿಯೂ ಭಕ್ತರ ಪ್ರಾರ್ಥನೆಯಂತೆ ಗುರುಗಳ ಅಪ್ಪಣೆಯನ್ನು ಹೊಂದಿ ಹೋಗಿ ಅವುಗಳನ್ನು ಸಾಂಗಗೊಳಿಸುವುದು; ಇವು ಸ್ವಯ ಜಂಗಮದ ಮುಖ್ಯ ಕರ್ಮಗಳು.

ಗುರುಸೇವೆ ಮತ್ತು ವಿದ್ಯಾರ್ಜನೆಗಳನ್ನು ಮಾಡಿದನಂತರ ಗುರುವಿನ ಅಪ್ಪಣೆಯನ್ನು ಹೊಂದಿ ದೇಶ ಸಂಚಾರ ಮಾಡಿ ಆತ್ಮೋನ್ನತಿಯ ಅನೇಕ ಅನುಭವಗಳನ್ನು ಹೊಂದುತ್ತ ಮತ ಪ್ರಸಾರ ಮಾಡುವುದು ಆ ಜಂಗಮದ ಎರಡನೆಯ ಅಂತಸ್ತು. ಹೀಗೆ ಆಚರಿಸುವವರಿಗೇನೇ ಚರಜಂಗಮರೆನ್ನುವರು. ಆಗ ಹಳ್ಳಿಗೆ ಏಕ ರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಗಳಂತೆ ಸಂಚರಿಸುತ್ತಿರಬೇಕು. ತಮ್ಮ ಇಷ್ಟಲಿಂಗಪೂಜೆ ಮೊದಲಾದ ನಿತ್ಯ ಕರ್ಮಗಳನ್ನು ತಪ್ಪದೇ ಮಾಡುತ್ತಿರಬೇಕು.

ಈ ಸಾಧಕಾವಸ್ಥೆಯಲ್ಲಿ ಸಂಚರಿಸುತ್ತಿರುವಾಗ ಭಿಕ್ಷಾನ್ನವು ಮೋಕ್ಷಕ್ಕೆ ಸಾಧನವೆಂದು ತಿಳಿದು ಲಿಂಗಾಂಗಿಗಳಲ್ಲಿ ಮಾತ್ರ ಒಂದೇ ವೇಳೆ ಭಕ್ತಿಯ ಭಿಕ್ಷವನ್ನು ಬೇಡಿ ಬಂದುದು ಶಿವಪ್ರಸಾದವೆಂದು ಭಾವಿಸಿ ಸ್ವೀಕರಿಸಬೇಕು. ತಮಗೆ ಇಂತಹದೇ ಬೇಕೆಂದಾಗಲಿ ಅಥವಾ ಇಂತಹದು ಬೇಡವೆಂದಾಗಲಿ ಹೇಳುವುದು ವಿಹಿತವಲ್ಲ.

ಏಕೆಂದರೆ ಬೇಕು ಮತ್ತು ಬೇಡವೆಂಬವೆರಡೂ ಭವದ ಬೀಜಗಳೆಂದೇ ಪ್ರಮಥರ ಸಿದ್ಧಾಂತ. ಆದುದರಿಂದ ಏನು ಬಂದರೂ ಅದೆಲ್ಲವೂ ಲಿಂಗ ಮುಖದಿಂದ ಬಂದ ಪ್ರಸಾದವೆಂದೇ ತಿಳಿದು ಅದರಲ್ಲಿ ಹಿಗ್ಗು ತಗ್ಗುಗಳಿಲ್ಲದೆ ಸ್ವೀಕರಿಸಬೇಕು. ಇವರ ಪವಿತ್ರಾಚರಣೆ ಮತ್ತು ಸದುಪದೇಶಗಳೇ ಭಕ್ತರು ಇವರಿಗೆ ಸಮರ್ಪಿಸಿದ ಭಕ್ತಿಯ ಭಿಕ್ಷಕ್ಕೆ ಪ್ರತಿಫಲವೆಂದು ಅವರು ತಿಳಿಯಬೇಕು.

ಹೀಗೆ ಹನ್ನೆರಡು ವರುಷವಾದರೂ ದೇಶ ಸಂಚಾರ ಮಾಡಿ ಅನಂತರ ಗುರುಗಳ ಬಳಿಗೆ ಬಂದು ಅವರ ಅಪ್ಪಣೆಯ ಪ್ರಕಾರ ಒಂದೇ ಸ್ಥಳದಲ್ಲಿದ್ದುಕೊಂಡು ಲಿಂಗಾನಂದತುಂದಿಲರಾಗಿರುವುದೇ ಜಂಗಮದ ಮೂರನೆಯ ಅಂತಸ್ತು. ಇವರೇ ಪರ ಜಂಗಮರು. ಹೀಗೆ ಪ್ರತಿಯೊಬ್ಬ ಜಂಗಮರು ಅಥವಾ ವಿರಕ್ತರು ಈ ಮೂರೂ ಅಂತಸ್ತುಗಳನ್ನು ಕ್ರಮದಿಂದ ಹೊಂದಲೇಬೇಕು. ವಿರಕ್ತ ಮಠಗಳಲ್ಲಿ ಈ ಪ್ರಕಾರ ಮೂರು ಅಂತಸ್ತುಗಳಲ್ಲಿರುವ ಜಂಗಮ ಸ್ವಾಮಿಗಳು ಇರುವುದೇ ವಿಹಿತವಾದುದು.

ವಿರಕ್ತ ಸ್ವಾಮಿಗಳಿಗೆ ಸ್ಥಳಕೂಡಿಸುವ ವಿಧಿಯು ನಡೆಯುವಾಗ ಈ ಎಲ್ಲಾ ಕ್ರಿಯೆಗಳೂ ಮಾತಿನಲ್ಲಾದರೂ ಜರುಗಲೇ ಬೇಕಾಗುತ್ತವೆ. ಸ್ಥಳಕೂಡಿಸುವ ಸ್ವಾಮಿಗಳಿಗೆ ದೇಶ ಸಂಚಾರದ ವೇಷ ಧರಿಸಲು ಹೇಳಿ ಅವರನ್ನು, ನೀವು ದೇಶ ಸಂಚಾರ ಮಾಡಿ ಬಂದಿರಾ? ಯಾವ ಯಾವ ಸ್ಥಳಗಳಲ್ಲಿ ಸಂಚಾರ ಮಾಡಿದಿರಿ ? ಎಂಬಿವೇ ಮೊದಲಾದ ಪ್ರಶ್ನೆಗಳನ್ನು ಕೇಳುವುದು ಮತ್ತು ಅವುಗಳಿಗೆ ಅವರ ಪರವಾಗಿ ಬೇರೆಯವರು ಉತ್ತರಗಳನ್ನು ಹೇಳುವುದು ಇವೆಲ್ಲವುಗಳನ್ನು ನೋಡಿದರೆ ಮೇಲೆ ವಿವರಿಸಲ್ಪಟ್ಟ ಜಂಗಮದ ರೀತಿ ನೀತಿಗಳು ಬಹುಕಾಲದಿಂದಲೂ ಬಳಿಕೆಯಲ್ಲಿದ್ದವೆಂದೇ ಸ್ಪಷ್ಟವಾಗುವುದಿಲ್ಲವೆ ? ಇತ್ತೀಚೆಗೆ ಆ ರೀತಿ ನೀತಿಗಳು ನುಡಿಯಲ್ಲಿಯೇ ಉಳಿದವು. ನಡೆಯು

ಮಾಯವಾಯಿತು. ಪೂರ್ವ ಪದ್ಧತಿಯೇ ಪುನಃ ಆಚರಣೆಯಲ್ಲಿ ಬರಬೇಕಾದುದೇ ಕ್ಷೇಮಕರವು.

ಶ್ರೀ ಶಿವಯೋಗಿಗಳವರು ಜಂಗಮತ್ವದ ಈ ಮೂರು ಅಂತಸ್ತುಗಳನ್ನು ಬಹು ತೃಪ್ತಿಕರವಾಗಿ ಹೊಂದಿ ಲೋಕಪೂಜ್ಯರಾದರು. ಈ ಮುಂಚೆ ವಿವರಿಸಿದಂತೆ ತಮ್ಮ ಗುರುಗಳಿಂದ ವಿರಕ್ತಾಶ್ರಮವನ್ನು ತಮ್ಮ ೨೦ ನೆಯ ವರುಷದಲ್ಲಿ ಹೊಂದಿದರು. ಆವರೆಗೂ ಗುರುಗಳ ಅಪ್ಪಣೆಯಂತೆ ಸ್ವಯ ಜಂಗಮಾಚಾರದಲ್ಲಿದ್ದರು. ಅನಂತರ ಗುರುಗಳ ಅಪ್ಪಣೆಯನ್ನು ಹೊಂದಿ ದೇಶ ಸಂಚಾರಕ್ಕೆ ಹೊರಟರು.

ದೇಶ ಸಂಚಾರವು ಈಗಿನಂತೆ ಉಗಿಯ ಬಂಡಿ ಅಥವಾ ಮೋಟಾರು ಬಂಡಿಯಲ್ಲಿ ಅಲ್ಲ. ಕೇವಲ ಪಾದಚಾರಿಗಳಾಗಿಯೇ ಸಾವಿರಾರು ಗ್ರಾಮಗಳಲ್ಲಿ ಇಪ್ಪತ್ತು ವರುಷ ಸಂಚರಿಸಿದರು. ಸೊಲ್ಲಾಪುರ, ಕಲ್ಯಾಣ, ಗೋಕರ್ಣ, ಬನವಾಸಿ, ಹರಿಹರ, ಹಂಪಿ, ಶ್ರೀಶೈಲ, ಕಂಚಿ, ರಾಮೇಶ್ವರ ಮೊದಲಾದ ದಕ್ಷಿಣ ಹಿಂದುಸ್ಥಾನದ ಅನೇಕ ಸುಪ್ರಸಿದ್ಧ ಸ್ಥಳಗಳನ್ನು ಈ ಸಂಚಾರದಲ್ಲಿ ಕಂಡರು. ಇದಲ್ಲವೆ ನಿಜವಾದ ಚರಜಂಗಮತ್ವದ ದಿವ್ಯತೇಜ ? ಅಂತಹ ಪೂರ್ವ ವಯಸ್ಸಿನಲ್ಲಿ ಇಂತಹ ಸಾಹಸದ ಸಂಚಾರದಿಂದಲೇ ತನುಮನ ಭಾವಗಳೆಲ್ಲಾ ಪರಿಶುದ್ಧವಾಗುತ್ತವಲ್ಲವೆ ?

ಹೀಗೆ ಶ್ರೀ ಶಿವಯೋಗಿಗಳವರು ಸಂಚರಿಸುತ್ತಿದ್ದಾಗ ಒಂದು ದಿನ ಹಿಪ್ಪರಗಿ ಎಂಬ ಗ್ರಾಮದ ಒಬ್ಬ ಶಿವಭಕ್ತನ ಮನೆಗೆ ಭಕ್ತಿ ಭಿಕ್ಷಕ್ಕಾಗಿ ದಯಮಾಡಿಸಿದರು. ಶ್ರೀ ಪ್ರಭುದೇವರು ಶ್ರೀ ಬಸವಣ್ಣನವರ ಮನೆಗೆ ಭಿಕ್ಷಕ್ಕೆ ದಯಮಾಡಿಸಿದಾಗ ಯಾವ ಸ್ಥಿತಿಯಲ್ಲಿದ್ದರೆಂಬುದು ಅವರ ಈ ಕೆಳಗಿನ ವಚನದಿಂದ ಹೇಗೆ ತಿಳಿಯಬಹುದಾಗಿದೆಯೋ ಹಾಗೆಯೇ ಶ್ರೀ ಶಿವಯೋಗಿಗಳವರು ಆ ಭಕ್ತನ ಮನೆಗೆ

ದಯಮಾಡಿಸಿದ್ದಾಗ ಇದ್ದರೆಂದು ಹೇಳಬಹುದು. ಆದರೆ ಆ ಭಕ್ತನೇನೂ ಬಸವಣ್ಣನವರಿಗೆ ಹೋಲುವವನಲ್ಲ. ಶ್ರೀ ಶಿವಯೋಗಿಗಳವರು ಮಾತ್ರ ಆ ಪ್ರಭುದೇವರನ್ನು ಹೋಲುವವರಾಗಿದ್ದರು.

ಸಮತೆಯೆಂಬ ಕಂಥೆಯ ತೊಟ್ಟು, ಸುಬುದ್ಧಿಯೆಂಬ ಟೊಪ್ಪರವನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕುಳಿಯ ಬೀಳದೆ, ವೈರಾಗ್ಯವೆಂಬ ಕೊರಡನೆಡಹದೆ, ಮರವೆಂಬ ಚಳಮೆಟ್ಟದೆ, ಗುಹೇಶ್ವರನ ಶರಣ ಬಂದೆನು ಭಕ್ತಿಯ ಭಿಕ್ಷೆಯನಿಕ್ಕು ಸಂಗನ ಬಸವಣ್ಣ.

ಚರಜಂಗಮಕ್ಕೆ ಸಲ್ಲುವ ಇಂತಹ ದಿವ್ಯ ಗುಣಗಳುಳ್ಳ ಶಿವಯೋಗಿಗಳವರು ಆ ಭಕ್ತನ ಮನೆಗೆ ದಯಮಾಡಿಸಲು ಆತನು ಒಂದು ಹಿಡಿ ಜೋಳವನ್ನು ನೀಡಿದನು. ಆಗ ಶಿವಯೋಗಿಗಳು ಆ ಜೋಳವನ್ನೇ ತೆಗೆದುಕೊಂಡು ಬಂದು ತಮ್ಮ ನಿತ್ಯಕರ್ಮವನ್ನು ತೀರಿಸಿಕೊಂಡು ಅವುಗಳನ್ನು ಅರೆದು ಶಿವಪ್ರಸಾದವೆಂದು ಸ್ವೀಕರಿಸಿದರು. ಇದಲ್ಲವೇ ಚರಜಂಗಮದ ನಿಜಾಚರಣೆಯ ಗುಟ್ಟು ?

ಭಕ್ತರಿಂದ ಏನಾದರೊಂದನ್ನು ಸಂಪಾದಿಸಬೇಕೆಂಬ ಉದ್ದೇಶದಿಂದ ಜಂಗಮ ಸ್ವಾಮಿಗಳು ಈ ಸಂಚಾರವನ್ನು ಪ್ರಾರಂಭಿಸಿರುವುದಿಲ್ಲ. ತಮ್ಮ ಆತ್ಮೋನ್ನತಿಯ ಜತೆಗೆ ಭಕ್ತರಿಗೂ ಶಿವಭಕ್ತಿ ಶಿವಜ್ಞಾನ ಶಿವಾಚಾರಗಳ ಶಿಕ್ಷಣ ದೊರೆಯಲೆಂಬುದೇ ಈ ಸಂಚಾರದ ಮುಖ್ಯೋದ್ದೇಶವಾಗಿರುತ್ತದೆ. ಅದು ಸಾಧಿಸಬೇಕಾದರೆ ತಮಗೆ ಇಂತಹದೇ ಬೇಕೆಂಬುದಿರಬಾರದಷ್ಟೆ. ಆದುದರಿಂದ ಶ್ರೀ ಶಿವಯೋಗಿಗಳವರು ಪ್ರಮಥರ ಕಟ್ಟಪ್ಪಣೆಯ ಪ್ರಕಾರವೇ ಹೀಗೆ ವರ್ತಿಸಿದರು. ವಿರಕ್ತೋತ್ತಮರಾದ ಆ ಶ್ರೀ ಚೆನ್ನಬಸವಣ್ಣನವರು ಪ್ರಭುದೇವರನ್ನು ಕುರಿತು ಹೀಗೆ ಹೇಳಿದ್ದಾರೆ :-

ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ, ಮಣ್ಣಿಂಗೆ ಬಂದಾತನಲ್ಲ, ಅಶನಕ್ಕೆ ಬಂದಾತನಲ್ಲ, ವ್ಯಸನಕ್ಕೆ ಬಂದಾತನಲ್ಲ, ಕೂಡಲ ಚೆನ್ನಸಂಗಯ್ಯ ಭಕ್ತಿಯ ಪಥವ ತೋರಬಂದನಯ್ಯಾ ಪ್ರಭುದೇವರು.

ಶ್ರೀ ಶಿವಯೋಗಿಗಳು ಆ ಪ್ರಭುದೇವರ ಸಂಪ್ರದಾಯದವರೇ ಆಗಿದ್ದುದರಿಂದ ಆ ಪ್ರಮಥ ಪುಂಗವರ ಆಚರಣೆಯನ್ನೇ ತಮ್ಮ ಮುಂದಿಟ್ಟುಕೊಂಡು ನಡೆದುದು ಸಹಜವಲ್ಲವೆ? ಇಪ್ಪತ್ತು ವರುಷ ಸಂಚಾರ ಮಾಡಿದನಂತರ ಆರು ವರುಷ ಏಕಾಂತವಾಸದಲ್ಲಿದ್ದು ಶಿವಯೋಗಾನುಸಂಧಾನವನ್ನು ಅಳವಡಿಸಿಕೊಂಡು ತಮ್ಮ ಗುರುಗಳ ದರ್ಶನಕ್ಕೆ ಬಂದರು.

ಅನಂತರ ಗುರುಗಳ ಅಪ್ಪಣೆಯಂತೆ ಅಥಣಿ ಗಚ್ಚಿನ ಮಠದ ಶಿವಯೋಗ ಮಂಟಪದಲ್ಲಿಯೇ ಇರಲಾರಂಭಿಸಿದರು. ಅಂದಿನಿಂದ ಪರ ಜಂಗಮದಾಚರಣೆಗಳು ಪ್ರಾರಂಭವಾದವು. ಆಗಲು ಕೂಡಾ ಬೇಕು ಬೇಡವೆಂಬವೆರಡೂ ಇರಲಿಲ್ಲ. ಲಿಂಗಾರ್ಪಿತ ಕಾಲಕ್ಕೆ ಯಾವುದು ಬರುತ್ತಿದ್ದಿತೋ ಅದನ್ನೇ ಶಿವಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಎಡೆಯು ಬರಬೇಕೆಂದು ಕಾದು ಕುಳಿತುಕೊಳ್ಳುತ್ತಿರಲಿಲ್ಲ. ಸಕಾಲಕ್ಕೆ ಬಾರದಿದ್ದರೆ ಶಿವನಿಚ್ಛೆ ಇಲ್ಲವೆಂದು ತಿಳಿದು ತಮ್ಮ ಮುಂದಿನ ಕ್ರಿಯೆಗಳನ್ನು ಮುಗಿಸಿ ಬಿಡುತ್ತಿದ್ದರು.

ಎಡೆ ಬರಲಿಲ್ಲವೆಂದು ಸೇವಕರ ಮೇಲೆ ಆಗ್ರಹವೆ? ಛೆ; ಇಲ್ಲವೇ ಇಲ್ಲ. ಎಡೆ ತಪ್ಪಿತಲ್ಲಾ ಎಂದು ಅನ್ಯರು ಕಳವಳ ಪಡುತ್ತಿರುವಾಗ, ನೀವೇಕೆ ಹೀಗೆ ಚಿಂತಿಸುತ್ತೀರಿ? ನಿಮ್ಮಿಚ್ಛೆಯೇ? ಶಿವನಿಚ್ಛೆಯಿರಲಿಲ್ಲ; ಎಂದು ಹೇಳಿ ಸಮಾಧಾನಗೊಳಿಸುತ್ತಿದ್ದರು. ಎಡೆಯು ಸಕಾಲಕ್ಕೆ ಬಂದರೂ ಅದು ದೂರದಲ್ಲಿದ್ದರೆ ಬಾಗಿ ಕೈ ಚಾಚಿ ಅದನ್ನು ತೆಗೆದುಕೊಳ್ಳುತ್ತಿರಲಿಲ್ಲ.

ಎಡೆಯು ತಾವಿದ್ದೆಡೆಯಲ್ಲಿಯೇ ಇರಬೇಕು. ಬಾಗಿ ಕೈನೀಡಿ ತೆಗೆದುಕೊಂಡದ್ದಾದರೆ ಅದು ಅಂಗದಾಸೆ. ಅಷ್ಟಕ್ಕು ಕೂಡಾ ಅವಕಾಶವಿರಲಿಲ್ಲ. ಬಂದುದ ಕೈಕೊಳ್ಳಬಲ್ಲಡೆ ನೇಮ ಎಂಬ ಅಪ್ಪನವರ ವಚನದಂತೆಯೇ ಕೈಗೆ ನಿಲುಕುವಷ್ಟರಲ್ಲಿಯೇ ಎಡೆ ಯಿದ್ದರೆ ಮಾತ್ರ ತೆಗೆದುಕೊಳ್ಳುತ್ತಿದ್ದರು. ಸೇವಕರ ಅಜಾಗರೂಕತೆ ಯಿಂದ ಅನೇಕ ಸಾರೆ ಎಡೆ ತಪ್ಪಿದುದುಂಟು. ಆಗ ಯಾವ ಹೊಯಿದಾಟಗಳೂ ಇರುತ್ತಿರಲಿಲ್ಲ. ಸಂತುಷ್ಟಚಿತ್ತರಾಗಿಯೇ ತಮ್ಮ ನಿತ್ಯ ಕರ್ಮಗಳನ್ನು ನಡೆಸುತ್ತಿದ್ದರು. ಇದಲ್ಲವೇ ಪ್ರಮಥ ರಾಚರಣೆಯ ದಿವ್ಯ ತೇಜ ?

> ಒಲ್ಲೆನೆಂಬುದು ವೈರಾಗ್ಯ. ಒಲಿವೆನೆಂಬುದು ಕಾಯ ಗುಣ. ಆವ ಪದಾರ್ಥವಾದರೇನು ? ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಆಚಾರ. ಕೂಡಲಸಂಗಮದೇವನ ಒಲಿಸ ಬಂದ ಪ್ರಸಾದ ಕಾಯವ ಕೆಡಿಸಲಾಗದು.

ಇಂತಹದು ಬೇಡವೆಂಬುದು ವೈರಾಗ್ಯವೃತ್ತಿ. ಅದು ಲಿಂಗಾರ್ಪಿತ ಮಾರ್ಗಕ್ಕೆ ಸರಿಯಾದುದಲ್ಲ. ಇಂತಹದೇ ಬೇಕೆಂಬುದು ಅಂಗ ಭೋಗದ ಗುಣ. ಅದೂ ಶಿವಾನುಭವಿಗಳಿಗೆ ಸರಿಯಲ್ಲ. ತಾವಿದ್ದಲ್ಲಿಗೆ ಯಾವುದು ಬರುವುದೋ ಅದನ್ನು ಶಿವನೇ ಕಳಿಸಿದ್ದಾನೆಂದು ತಿಳಿದು ಆತನಿಗರ್ಪಿಸಿ ಆ ಲಿಂಗಪ್ರಸಾದವನ್ನು ಸೇವಿಸುವುದೇ ಪ್ರಮಥರ ಆಚಾರ. ಈ ದೇಹವು ಶಿವನನ್ನು ಒಲಿಸಲಿಕ್ಕಾಗಿ ಬಂದುದು. ಇದು ಶಿವಾನುಗ್ರಹದಿಂದಲೇ ಪ್ರಾಪ್ತವಾದುದು. ಆದಕಾರಣ ಇಂತಹದನ್ನು ತೆಗೆದುಕೊಳ್ಳುವುದೇ ಇಲ್ಲವೆಂಬ ವೈರಾಗ್ಯದಿಂದಾಗಲಿ ಅಥವಾ ಇಂತಹದೇ ಬೇಕೆಂಬ ಭೋಗೇಚ್ಛೆಯಿಂದಾಗಲಿ ಕೆಡಿಸಿ ಕೊಳ್ಳಬಾರದೆಂಬ ಆ ಮಹಾನುಭಾವರಾದ ಬಸವಣ್ಣನವರ

ಅಪ್ಪಣೆಯನ್ನು ಶ್ರೀ ಶಿವಯೋಗಿಗಳವರು ತಮ್ಮ ಆಚರಣೆಯಲ್ಲಿ ಹೇಗಿಟ್ಟುಕೊಂಡಿದ್ದರೆಂಬುದು ಮೇಲಣ ಆಚರಣೆಗಳಿಂದ ಸ್ಪಷ್ಟ ವಾಗುವುದಿಲ್ಲವೆ ?

ಬಂದುದ ಕೈಕೊಳ್ಳುವ ನಿಯಮವಿದ್ದಿತೇ ವಿನಾ ಇಂತಹ ಹಾಲು, ತುಪ್ಪ, ಇಂತಿಂತಹ ಭಕ್ಷ್ಯಭೋಜ್ಯಗಳೇ ಬೇಕೆಂಬುದಾಗಲಿ ಅಥವಾ ವಿಹಿತಾಹಾರಗಳಲ್ಲಿಯೇ ಇಂತಿಂತಹವುಗಳು ತ್ಯಾಜ್ಯವೆಂಬು ದಾಗಲಿ ಶಿವಯೋಗಿಗಳವರಿಗಿರಲಿಲ್ಲ. ಈ ಗ್ರಂಥಕಾರನು ಮೊದಲು ಹಾಲು ಮತ್ತು ಅನ್ನಗಳನ್ನೇ ತೆಗೆದುಕೊಳ್ಳುವ ನಿಯಮದವನಾಗಿದ್ದನು. ಈ ನಿಯಮವು ಹೇಗೋ ಆ ಮಹಾನುಭಾವರಿಗೆ ವೇದ್ಯವಾಯಿತು. ಆಗ ಒಂದು ದಿನ "ಹಾಲೇ ಬೇಕೆಂಬುವವರು ಮುಂದೆ ಬೆಕ್ಕಾಗಿ ಹುಟ್ಟುವರು" ಎಂದು ಅಪ್ಪಣೆ ಮಾಡಿ ತಮ್ಮ ಯೋಗಾನಂದದಿಂದ ನಕ್ಕು ಬಿಟ್ಟರು.

ಸಂಕಲ್ಪಾನುಗುಣವಾದ ಜನ್ಮಪ್ರಾಪ್ತಿಯ ಸಿದ್ಧಾಂತವು ಈ ನುಡಿಯಲ್ಲಿದೆಯೆಂದು ಆಗ ಭಾವಿಸಿದೆನು. ಇತ್ತಲಾಗಿ ಪ್ರಮಥರ ವಚನಗಳನ್ನು ಓದುವಾಗ ಈ ಕೆಳಗಿನ ವಚನವು ಕಣ್ಣಿಗೆ ಬಿದ್ದಿತು. ಆಗ ತಟ್ಟನೆ ಶಿವಯೋಗಿಗಳವರು ಆಗ ಅಪ್ಪಣೆ ಕೊಡಿಸಿದ್ದ ವಾಕ್ಯ ನೆನಪಿಗೆ ಬಂದಿತು. ಆ ವಚನ ಹೀಗಿದೆ. ಇದು ಶ್ರೀ ಪ್ರಭುದೇವರು ನುಡಿದುದು :-

> ಹಾಲ ನೇಮ ಹಿಡಿದವರು ಬೆಕ್ಕಾಗಿ ಹುಟ್ಟುವರು. ಕಡಲೆ ನೇಮ ಹಿಡಿದವರು ಕುದುರೆಯಾಗಿ ಹುಟ್ಟುವರು. ಪುಷ್ಪದ ನೇಮ ಹಿಡಿದವರು ತುಂಬಿಯಾಗಿ ಹುಟ್ಟುವರು. ಅಗ್ಗವಣಿಯ ನೇಮ ಹಿಡಿದವರು ಕಪ್ಪೆಯಾಗಿ ಹುಟ್ಟು ವರು. ಇವರು ಷಟ್‌ಸ್ಥಳಕ್ಕೆ ಹೊರಗು. ಭಕ್ತಿ ನಿಷ್ಠೆ ಯಿಲ್ಲದವರ ಕಂಡಡೆ ಮೆಚ್ಚ ಗುಹೇಶ್ವರನು.

ಇಂತಹ ಹಾಲು, ಇಂತಹ ಹೂವು, ಇಂತಹ ನದಿಯ ನೀರು ಹೀಗೆ ಇಂಥಾದ್ದೇ ಬೇಕೆಂಬ ನಿಯಮಗಳನ್ನು ಮಾಡಿಕೊಳ್ಳುವುದು ಪ್ರಮಥರ ಮಾರ್ಗವಲ್ಲ. ಆದುದರಿಂದ ಆ ಮಹಾ ಶಿವಯೋಗಿಗಳವರು ಇಂತಹ ಯಾವ ನಿಯಮಗಳನ್ನೂ ಇಟ್ಟುಕೊಂಡಿರಲಿಲ್ಲ. ಮತ್ತು ಹುಣ್ಣಿಮೆ, ಅಮಾವಾಸಿ, ಸೋಮವಾರ, ಶಿವರಾತ್ರಿ, ಏಕಾದಶಿ ಮೊದಲಾದ ಬೇರೆ ಬೇರೆ ತಿಥಿ ವಾರಗಳಲ್ಲಿ ಉಪವಾಸಾದಿ ವ್ರತಗಳನ್ನೂ ಆಚರಿಸುತ್ತಿರಲಿಲ್ಲ. ಶ್ರೀ ಬಸವಣ್ಣನವರು ಈ ವಿಚಾರವಾಗಿ ಹೇಳಿದ ವಚನದಲ್ಲಿ ಹೀಗಿದೆ :-

> ಸೋಮವಾರ ಮಂಗಳವಾರವೆಂದು ಮಾಡುವ ಭಕ್ತನ ಲಿಂಗಭಕ್ತಂಗೆಂತು ಸರಿಯೆಂಬೆನಯ್ಯಾ ? ದಿನ ಶ್ರೇಷ್ಠವೊ? ಲಿಂಗಶ್ರೇಷ್ಠವೋ ?........ಇದು ಕಾರಣ ದಿನ ವಾರಂಗಳು ಶ್ರೇಷ್ಠವೆಂದು ಏಕ ಭುಕ್ತೋಪವಾಸಂಗಳಂ ಮಾಡುವ ಭಕ್ತಂಗೆ ಕುಂಭೀ ಪಾತಕ ನರಕ ತಪ್ಪದು ಕೂಡಲ ಸಂಗಮದೇವಾ.

ಪ್ರಸಾದವೇದ್ಯರಿಗೆ ಈ ಉಪವಾಸಾದಿ ವ್ರತಗಳು ಬೇಕಾಗಿಲ್ಲ. ಪ್ರಮಥರು ಪ್ರಸಾದಕಾಯರು. ನಮ್ಮಂತೆ ರುಚಿಗಾಗಿ ಮನಬಂದಂತೆ ಉಂಡು ನರಳುವವರಲ್ಲ. ಅವರಿಗೆ ಈ ವಾರ ತಿಥಿಗಳ ಲಂಘನ ಚಿಕಿತ್ಸೆ ಬೇಕಾಗಿರಲಿಲ್ಲ. ಪ್ರಸಾದವೇದ್ಯರು ಹಿತ ಮಿತಗಳನ್ನು ಅರಿತವರೇ ಆಗಿರುತ್ತಾರೆ. ಆದುದರಿಂದಲೇ ಪ್ರಸಾದವೇದ್ಯರಿಗೆ ಮನ ವಿಕಾರವಿಲ್ಲವೆಂದು ಪ್ರಮಥರು ನಿರ್ಧರಿಸಿದ್ದಾರೆ. ಈ ವರೆಗಿನ ವೀವೆಚನೆಯಿಂದ ಶ್ರೀ ಶಿವಯೋಗಿಗಳವರ ಈ ಸಂಬಂಧವಾದ ಎಲ್ಲ ಆಚರಣೆಗಳ ಸಾರವೂ ಈ ಕೆಳಗಿನ ಒಂದೇ ಒಂದು ವಚನದಲ್ಲಿದೆಯೆಂದು ಧಾರಾಳವಾಗಿ ಹೇಳಬಹುದು.

ಅಂಗವುಳ್ಳನ್ನಕ್ಕ ಶಿವಲಿಂಗ ಪೂಜೆಯ ಮಾಡಲೇಬೇಕು. ಆತ್ಮನ ಕ್ಷುಧೆಯುಳ್ಳನ್ನಕ್ಕ ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿಕೊಳಲೇ ಬೇಕು. ಇದೇ ಅರುವಿನ ಬಿತ್ತು. ಜ್ಞಾನದ ಗೊತ್ತು. ಸರ್ವಮಯದ ಯುಕ್ತಿ. ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವನರಿವ ಶಕ್ತಿ.

ಜೀವನು ದೇಹವನ್ನು ಧರಿಸಿರುವವರೆಗೂ ಶಿವಲಿಂಗವನ್ನು ಪೂಜಿಸಲೇ ಬೇಕು. ಜ್ಞಾನೋದಯವಾಯಿತೆಂದು ಕ್ರಿಯೆಯನ್ನು ಬಿಡಬಾರದು. ದೇಹ ಬಿಟ್ಟಾಗಲೇ ಕ್ರಿಯೆಯು ಅಡಗುವುದು. ದೇಹವಿರುವ ವರೆಗೂ ಹಸಿವು ತೃಷೆಗಳಿರುವುದು ಸ್ವಾಭಾವಿಕ. ಆಗ ಇಂತಹದು ಬೇಡ ಅಥವಾ ಇಂತಹದು ಬೇಕೆಂಬ ಆಗ್ರಹ ತೊಡದೆ ಬಂದುದನ್ನು ಲಿಂಗಾರ್ಪಿತ ಮಾಡಿ ಸೇವಿಸಬೇಕಾದುದೇ ಶಿವಾಚಾರದ ಜ್ಞಾನವಿದ್ದುದರ ಗುರುತು. ಜೀವನನ್ನು ಭೋಗದಲ್ಲಾಗಲಿ ಬಳಲಿಕೆಯಲ್ಲಾಗಲಿ ತಳ್ಳದೆ ಶಿವಭಾವದಲ್ಲಿರಿಸಿದ್ದಾದರೆ ಕೊನೆಗೆ ಶಿವನಲ್ಲಿಯೇ ಸೇರುವ ಶಕ್ತಿಯನ್ನು ಹೊಂದಲನುಕೂಲವಾಗುತ್ತದೆ.

ಆದಕಾರಣ ಭೋಗ ಮತ್ತು ತ್ಯಾಗ ಮಾರ್ಗಗಳನ್ನು ಬಿಟ್ಟು ಶಿವಯೋಗಮಾರ್ಗವನ್ನೇ ಪ್ರಮಥರು ಬೋಧಿಸಿದ್ದಾರೆ. ಆ ಪ್ರಮಥರ ಮಾರ್ಗವನ್ನೇ ಶಿವಯೋಗಿಗಳವರೂ ಅನುಸರಿಸಿದ್ದರಿಂದ ಬೇಕು ಬೇಡೆಂಬೆರಡು ಭವಬೀಜಗಳ ಹುರಿದು ಲೋಕದೊಳಗಿದ್ದು ಇಲ್ಲದ ಮಹಾನುಭಾವಿಗಳಾದರು.

*

೩ ನೆಯ ಪ್ರಕರಣ

# ಅಂಜಿ ; ಅಂಜುವೆ

*

ಶ್ರೀ ಶಿವಯೋಗಿಗಳವರು ಇಪ್ಪತ್ತು ವರುಷ ದೇಶ ಸಂಚಾರ ಮಾಡಿದನಂತರ ಸವದೆ ಗ್ರಾಮದ ಹತ್ತಿರ ಗುಹೇಶ್ವರ ಗವಿಯಲ್ಲಿ ಆರು ವರುಷ ಶಿವಯೋಗಾನುಸಂಧಾನಕ್ಕೋಸ್ಕರ ಏಕಾಂತವಾಸ ದಲ್ಲಿದ್ದರು. ಒಂದು ದಿನ ಒಂದು ಸರ್ಪವು ಆ ಗವಿಯ ಬಾಗಿಲಲ್ಲಿ ಮಲಗಿದ್ದಿತು. ಒಳಗೆ ಶಿವಯೋಗಿಗಳಿದ್ದರು. ಅಷ್ಟರಲ್ಲಿ ಆ ಸವದೆ ಗ್ರಾಮದ ಭಕ್ತರು ಶಿವಯೋಗಿಗಳವರ ದರ್ಶನ ಹೊಂದಬೇಕೆಂದು ಅಲ್ಲಿಗೆ ಬಂದರು.

ಗವಿಯ ಬಾಗಿಲಲ್ಲೇ ಹಾವು ಮಲಗಿದ್ದನ್ನು ನೋಡಿ ಅವರು ಅಂಜಿದರು. ಇದು ಒಳಗೆ ಹೋದರೆ ಘಾತವಾಗುವುದಲ್ಲಾ ಎಂದು ಚಿಂತಿಸುತ್ತ ಏನು ಮಾಡಬೇಕೆಂದು ತಮ್ಮ ತಮ್ಮಲ್ಲಿಯೇ ಮಾತ ನಾಡುತ್ತಿದ್ದರು. ಅಷ್ಟರಲ್ಲಿ ಶಿವಯೋಗಿಗಳೂ ಒಳಗಿನಿಂದ ಹೊರಗೆ ಬಂದರು. ಆ ಹಾವೂ ಮುಂದೆ ಹರಿದು ಹೋಯಿತು. ಅದೇನು ಮಾಡುತ್ತವೆ ? ಎಂದು ಶಿವಯೋಗಿಗಳು ಆಗ ನುಡಿದರು.

ಸವದೆ ಗ್ರಾಮದ ಭಕ್ತರು ಶಿವಯೋಗಿಗಳಿಗೆ ತಾವು ಈ ಸ್ಥಳ ವನ್ನು ಬಿಟ್ಟು ಊರಲ್ಲಿ ಬರಬೇಕೆಂತಲೂ ನಾವು ತಮಗೆ ಬೇಕಾಗುವ ಎಲ್ಲಾ ವ್ಯವಸ್ಥೆಗಳನ್ನು ಮಾಡುತ್ತೇವೆಂತಲೂ ಬಹಳವಾಗಿ ಹೇಳಿ ಕೊಂಡರು. ಆದರೆ ಶಿವಯೋಗಿಗಳು ಅವರ ಪ್ರಾರ್ಥನೆಯನ್ನು ಒಪ್ಪದೆ ಆ ಗವಿಯಲ್ಲಿಯೇ ಇದ್ದರು.

ಶ್ರೀ ಶಿವಯೋಗಿಗಳು ಅಥಣಿ ಗಚ್ಚಿನ ಮಠದಲ್ಲಿ ನೆಲೆಸಿದಾಗ ಇವರ ಯೋಗಮಂಟಪದಲ್ಲಿ ಒಮ್ಮೆ ಒಂದು ಸರ್ಪವು ಬಂದಿದ್ದಿತು. ಅನೇಕರು ಬಹು ಭಯಪಟ್ಟು ಇನ್ನೇನು ಮಾಡಬೇಕೆಂದು ಬಹು ಚಿಂತಿಸುತ್ತಿದ್ದರು. ಆಗ ಒಳಗಿದ್ದ ಶಿವಯೋಗಿಗಳು ಅದೇನು ಮಾಡುತ್ತದೆ ? ಈಗ ತಾನೇ ಹೋಗುತ್ತದೆ. ಎಂದು ಹೇಳಿದರು. ಸ್ವಲ್ಪ ಹೊತ್ತಿನಲ್ಲಿ ಅದು ಅಲ್ಲಿಂದ ಹೊರಗೆ ಹರಿದು ಹೋಯಿತು.

ಅಂಕಲಿಗಿಯ ಮಹಾ ತಪಸ್ವಿಗಳಾದ ಶ್ರೀ ಅಡವಿ ಸ್ವಾಮಿಗಳ ದರ್ಶನಕ್ಕೆಂದು ಶಿವಯೋಗಿಗಳು ಒಂದು ದಿನ ಹೋಗುತ್ತಿದ್ದರು. ಆಗ ದಾರಿಯಲ್ಲಿ ಒಂದು ಹುಲಿ ಮಲಗಿದ್ದಿತು. ಅದನ್ನು ನೋಡಿ ತಮ್ಮ ಜೋಳಿಗೆಯಲ್ಲಿದ್ದ ಒಂದು ಉತ್ತುತ್ತೆಯನ್ನು ಅದರ ಕಡೆ ಎಸೆದರು. ಅದು ಇವರನ್ನು ನೋಡಿ ಅಲ್ಲಿಂದ ಎದ್ದು ಹೋಯಿತು.

ಈ ಪ್ರಕಾರ ಅನೇಕ ಸಾರಿ ಕ್ರೂರ ಪ್ರಾಣಿಗಳು ಹತ್ತಿರ ಬಂದರೂ ಕೂಡಾ ಇವರು ಅಂಜುತ್ತಿರಲಿಲ್ಲ. ಇದು ಸರ್ವಾತ್ಮಭಾವವು ಬಲಿತಿದ್ದರ ಗುರುತು. ಪ್ರಾಣಿಗಳಲ್ಲಿ ಅಪಾರವಾದ ದಯೆಯುಳ್ಳ ವರಿಗೆ ಕ್ರೂರ ಪ್ರಾಣಿಗಳು ಕೂಡಾ ಸಾಧು ಪ್ರಾಣಿಗಳಾಗುತ್ತವೆ. ಯಾರು ಆತ್ಮಜ್ಯೋತಿಯಿಂದ ವೈರತ್ವವನ್ನು ಸುಟ್ಟಿದ್ದಾರೆಯೋ ಅವರ ನೇತ್ರದಿಂದ ಒಂದು ದಿವ್ಯ ತೇಜವು ಹೊರಸೂಸುತ್ತಿದೆ. ಆ ತೇಜವು ಕ್ರೂರ ಪ್ರಾಣಿಗಳನ್ನು ಸಾಧು ಪ್ರಾಣಿಗಳನ್ನಾಗಿ ಮಾಡುವುದೆಂದು ಯೋಗಶಾಸ್ತ್ರದ ಸಿದ್ಧಾಂತ.

ಸಂಪೂರ್ಣ ನಿರ್ವೈರಿಯಾದ ಮಹಾತ್ಮನನ್ನು ಯಾವ ಪ್ರಾಣಿಯೂ ಹಿಂಸಿಸಲಾರದೆಂದೇ ಯೋಗಿಗಳ ಮತ. ಅಕ್ಕಸಾಲಿಗರು ಬಂಗಾರವನ್ನು ಪರೀಕ್ಷಿಸಲು ತಮ್ಮ ಹತ್ತಿರ ಹೇಗೆ ಒರೆಗಲ್ಲನ್ನಿಟ್ಟು ಕೊಂಡಿರುತ್ತಾರೆಯೋ ಹಾಗೆಯೇ ಯೋಗಿಗಳು ತಮ್ಮಲ್ಲಿ ಪ್ರಾಪ್ತವಾದ

ಯೋಗಸಿದ್ಧಿಯ ಪರೀಕ್ಷೆಗಾಗಿಯೇ ಯೋಗಾಶ್ರಮದಲ್ಲಿ ಗಿಳಿ ಮತ್ತು ಚಿಗುರೆಗಳನ್ನು ಇಟ್ಟುಕೊಳ್ಳುತ್ತಾರಂತೆ. ಅವು ತಮ್ಮ ನೆರೆಯಲ್ಲಿ ಬೇಕಾದ ಹಾಗೆ ತಿರುಗಾಡುತ್ತಿದ್ದರೂ ಅವುಗಳನ್ನು ಅವುಗಳ ಜಾತಿವೈರಿ ಪ್ರಾಣಿಗಳಾದ ಬೆಕ್ಕು ಮತ್ತು ಹುಲಿಗಳು ಹಿಂಸಿಸದಿದ್ದರೆ ತಮಗೆ ಯೋಗಸಿದ್ಧಿಯಾಗಿದೆಯೆಂದು ತಿಳಿಯುತ್ತಾರಂತೆ.

ಶ್ರೀ ಶಿವಯೋಗಿಗಳೇನೂ ಇಂಥ ಯಾವ ತೋರಿಕೆಯ ಉಪಕರಣಗಳನ್ನಿಟ್ಟುಕೊಂಡು ತಮ್ಮ ಶಿವಯೋಗ ಸಿದ್ಧಿಯನ್ನು ಪರೀಕ್ಷಿಸಿರಲಿಲ್ಲ. ಹಾಗೆ ಮಾಡುವುದು ಪ್ರಮಥರ ಮಾರ್ಗವೂ ಅಲ್ಲ. ತಾನಾಗಿಯೇ ಸಂಭವಿಸಿದ ಕೆಲವು ಸಂಗತಿಗಳ ಮೇಲಿಂದ ಶ್ರೀ ಶಿವಯೋಗಿಗಳು ಕ್ರೂರ ಪ್ರಾಣಿಗಳಿಗೆ ಅಂಜದಿದ್ದುದು ಮತ್ತು ಅವು ಇವರಿಗೆ ಹಿಂಸಿಸದಿದ್ದುದು ಯೋಗಸಿದ್ಧಿಯ ಪರಿಣಾಮಗಳೆಂದು ನಾವು ಯೋಚಿಸಬಹುದಾಗಿದೆ.

ಯಾರು ಲಿಂಗಾನುಭವಿಗಳೋ ಮತ್ತು ಪವಿತ್ರಾಚರಣೆಯ ಪುತ್ಥಳಿಯಾಗಿದ್ದಾರೆಯೋ ಅವರು ಮರಣಕ್ಕೆ ಅಂಜುವುದಿಲ್ಲ. ಯಾರಿಗೆ ಜೀವದಾಸೆಯಿಲ್ಲವೋ ಅವರು ಯಾವ ಕ್ರೂರ ಪ್ರಾಣಿಗಳಿಗೆ ತಾನೆ ಅಂಜುವರು ? ಅವರಿಗೆ ಅಪವಿತ್ರಾಚರಣೆಗಳು ಮಾತ್ರ ಭಯಗೊಳಿಸುತ್ತವೆ. ಶ್ರೀ ಬಸವಣ್ಣನವರ ಈ ಕೆಳಗಿನ ವಚನವಲ್ಲಿರುವ ತತ್ವವು ಶಿವಯೋಗಿಗಳಲ್ಲಿ ಅಳವಟ್ಟಿತ್ತೆಂದು ಸ್ಪಷ್ಟವಾಗಿ ತೋರುತ್ತದೆ.

> **ಹರಿವ ಹಾವಿಂಗಂಜೆ. ಉರಿಯ ನಾಲಿಗೆಗಂಜೆ. ಸುರಿಗೆಯ ಮೊನೆಗಂಜೆ. ಒಂದಕ್ಕಂಜುವೆ. ಒಂದಕ್ಕಳುಕುವೆ. ಪರಸ್ತ್ರೀ ಪರಧನವೆಂಬ ಜೂಜಿಂಗಂಜುವೆ. ಮುನ್ನಂಜದ ರಾವಣನೇನು ವಿಧಿಗೊಳಗಾದ ? ನಾನಂಜುವೆನಯ್ಯ ಕೂಡಲ ಸಂಗಮದೇವಾ.**

ಹಾವಿಗಾಗಲಿ ಅಥವಾ ಬೆಂಕಿಗಾಗಲಿ ಇಲ್ಲವೆ ಶಸ್ತ್ರಕ್ಕಾಗಲಿ ಯಾರು ಅಂಜುವುದಿಲ್ಲವೋ ಅವರು ಮರಣಕ್ಕೆ ಭಯಪಡುವವರಲ್ಲ. ಶ್ರೀ ಶಿವಯೋಗಿಗಳು ಇಂಥ ಸ್ಥಿತಿಯಲ್ಲಿದ್ದರು. ಈ ನಿರ್ಭಯವು ತಮೋಗುಣ ಅಥವಾ ರಜೋಗುಣದಿಂದುಂಟಾಗಿರಲಿಲ್ಲ. ಅದು ಕೇವಲ ಸತ್ವಗುಣಶೀಲವಾದುದಾಗಿದ್ದಿತು. ಲಿಂಗಾಂಗಸಾಮರಸ್ಯ ಜ್ಞಾನದಿಂದುದಯವಾದುದಾಗಿದ್ದಿತು.

ಪವಿತ್ರಾಚರಣೆಯ ಪುತ್ಥಳಿಯಾಗಿದ್ದರೆಂಬುದಕ್ಕೆ ಈ ಕೆಳಗಿನ ಒಂದು ಪ್ರಸಂಗವೇ ಸಾಕು. ಅವರ ಸೇವೆಯಲ್ಲಿಯೇ ಇದ್ದ ಒಬ್ಬ ಪೂಜ್ಯರು ಹೀಗೆ ಆ ಪ್ರಸಂಗವನ್ನು ತಿಳಿಸಿದ್ದಾರೆ.

“ ಶಿವಯೋಗಿಗಳು ಒಂದು ದಿನ ತಮ್ಮ ಯೋಗಮಂಟಪ ದಿಂದ ಹೊರಗೆ ಬಂದನಂತರ ನನ್ನನ್ನು ಕರೆದು ‘ಚೇಳಿದ’ ಕಸಬರಿಗೆ ತೆಗೆದುಕೊಂಡು ಬಾ ಎಂದು ನನಗೆ ಅಪ್ಪಣೆ ಮಾಡಿದರು. ನಾನು ಬಹು ಅವಸರದಿಂದ ಕಸಬರಿಗೆಯನ್ನು ತೆಗೆದುಕೊಂಡು ಹೋದೆನು. ಆ ಯೋಗ ಮಂಟಪದ ಮುಂದೆ ಒಂದು ರೂಪಾಯಿ ಇದ್ದಿತು. ಅದನ್ನು ತೋರಿಸಿ ತಮ್ಮ ಯೋಗಾನಂದದಿಂದ ನಕ್ಕು ಇದನ್ನು ತೆಗೆದುಕೊಂಡು ಹೋಗೆಂದು ಅಪ್ಪಣೆ ಮಾಡಿದರು. ”

ತಮ್ಮ ಗುಣ ಶೀಲಾಚಾರಗಳಿಗೆ ಅತ್ಯಂತ ತ್ಯಾಜ್ಯವಾಗಿರತಕ್ಕ ಧನಾದಿಗಳ ವಿಷಯದಲ್ಲಿ ಎಷ್ಟು ಅಂಜಿಕೆಯುಳ್ಳವರಾಗಿದ್ದರೆಂಬುದು ಮೇಲಣ ಸಂಗತಿಯಿಂದ ಸ್ಪಷ್ಟವಾಗುತ್ತದೆ. ದ್ರವ್ಯಾರ್ಜನೆ ಅಥವಾ ದ್ರವ್ಯಸಂಗ್ರಹವು ಆ ಮಹಾಶಿವಯೋಗಿಗಳವರ ಶೀಲಾಚಾರಗಳಿಗೆ ವಿರೋಧವಾದುದು. ಅದೇ ಅವರಿಗೆ ಪರಧರ್ಮ. ಎಂದ ಮೇಲೆ ಅದು ಭಯಪ್ರದವಾದುದೆಂದೇ ತಿಳಿದುದು ಸ್ವಾಭಾವಿಕವಲ್ಲವೆ ?

ಹಣ, ಬಂಗಾರ, ವಸ್ತ್ರ ಒಟ್ಟೆಯಲ್ಲಿ ನಿಟ್ಟನೆ ಬಿದ್ದಿರಲು ಕಂಡು ಕಾತರಿಸಿ ಕೈಮುಟ್ಟೆ ಎತ್ತದ ನಡತೆಯೇ ಪ್ರಮಥರ ನಡತೆ. ಶಿವ ಯೋಗಿಗಳಾದರೋ ಪ್ರಮಥರ ಮಾರ್ಗವನ್ನೇ ಅನುಸರಿಸಿ ನಡೆವವರು. ಎಂದ ಮೇಲೆ ಆ ಹಣವನ್ನು ತಾವು ಮುಟ್ಟುವರೆ ? ಅದಕ್ಕಾಗಿಯೇ ಹಾಗೆ ಹೇಳಿ ತೆಗೆಯಿಸಿ, ಆ ಸೇವೆಯಲ್ಲಿರುವವರಿಗೂ ಅದೊಂದು ಶಿಕ್ಷಣವನ್ನೇ ಕೊಟ್ಟರೆಂದು ತಿಳಿಯಬಹುದಲ್ಲವೆ ?



೪ ನೆಯ ಪ್ರಕರಣ

# ಛಲಬೇಕು ಶರಣಂಗೆ

*

ಶ್ರೀ ಶಿವಯೋಗಿಗಳು ಚರ ಜಂಗಮ ಸ್ಥಿತಿಯಲ್ಲಿ ಇಪ್ಪತ್ತು ವರುಷ ದೇಶ ಸಂಚರಿಸಿದ ಮೇಲೆ ಗುಹೇಶ್ವರ ಗವಿಯಲ್ಲಿ ಆರು ವರುಷ ಶಿವಯೋಗಾನುಸಂಧಾನದಲ್ಲಿದ್ದು ಆ ಬಳಿಕ ಅಥಣಿಗೆ ಆಗಮಿಸಿದರು. ಇವರ ಈ ಅಸಾಧಾರಣವಾದ ವಿರತಿಯನ್ನು ಗುರುಗಳು ನೋಡಿ ಪರಮ ಸಂತೋಷಪಟ್ಟರು.

ಇನ್ನು ಮೇಲೆ ಇವರು ಎಲ್ಲಿಯೂ ಸಂಚಾರಕ್ಕೆ ಹೋಗಬಾರದೆಂದು ಆ ಗಚ್ಚಿನಮಠದ ಅಧಿಕಾರವನ್ನು ವಹಿಸಿಕೊಳ್ಳಲು ಅಪ್ಪಣೆ ಮಾಡಿದರು. ಆಗ ಶಿವಯೋಗಿಗಳು ತಮ್ಮ ಗುರುಗಳಲ್ಲಿ ಹೀಗೆ ಬಿನ್ನಯಿಸಿಕೊಂಡರು.

" ಈ ಮಠಮಾನ್ಯಗಳ ಅಧಿಕಾರ ನನಗೆ ಬೇಕಿಲ್ಲ. ತಮ್ಮ ಪಾದಸೇವೆಯೇ ಸಾಕು. " ಗುರುಗಳು ಇವರ ಮನೋಗತವನ್ನು ಅರಿತುಕೊಂಡರು. ಇವರಲ್ಲಿದ್ದ ಅದ್ವಿತೀಯವಾದ ವಿರತಿಯು ಮೊದಲೇ ಗೊತ್ತಿದ್ದಿತು. ಶಿವಯೋಗಿಗಳ ಈ ಪ್ರಾರ್ಥನೆಯನ್ನು ಗುರುಗಳು ಮನ್ನಿಸಿ ಹೀಗೆ ಅಪ್ಪಣೆ ಮಾಡಿದರು.

" ಈ ಮಠದ ಅಧಿಕಾರ ನಿಮಗೆ ಬೇಕಾಗಿಲ್ಲದಿದ್ದರೆ ಬಿಡಿರಿ. ನೀವು ಮಾತ್ರ ಇನ್ನು ಮೇಲೆ ಎಲ್ಲಿಯೂ ಸಂಚಾರಕ್ಕೆ ಹೋಗಕೂಡದು; ಈ ಮಠದಲ್ಲಿಯೇ ನಿಮ್ಮ ಲಿಂಗಪೂಜೆಯ ಆನಂದದಲ್ಲಿರಬೇಕು. "

ಗುರುಗಳ ಈ ಅಪ್ಪಣೆಯನ್ನು ಶಿವಯೋಗಿಗಳು ಒಪ್ಪಿಕೊಂಡು ನಾಲ್ವತ್ತು ವರುಷಗಳ ವರೆಗೆ ಆ ಗಚ್ಚಿನ ಮಠದ ಯೋಗಮಂಟಪ ದಲ್ಲಿ ವಾಸವಾಗಿದ್ದರು. ಅಂದಿನಿಂದ ಪರ ಜಂಗಮ ವೃತ್ತಿಯು ಬಲಿಯಲಾರಂಭಿಸಿತು.

ಶ್ರೀ ಶಿವಯೋಗಿಗಳು ಯೋಗಗುಣಶೀಲರಷ್ಟೆ. ಆದುದರಿಂದ ಲಿಂಗಪೂಜೆಯೇ ಇವರ ಮಹಾ ವ್ರತವಾಗಿದ್ದಿತು. ತ್ರಿಕಾಲಗಳಲ್ಲಿಯೂ ಲಿಂಗಪೂಜೆಯು ಅವಿಚ್ಛಿನ್ನವಾಗಿ ಸಕಾಲಕ್ಕೆ ನಡೆಯಲಾರಂಭ ವಾಯಿತು. ಸರ್ವ ಶಕ್ತಿ, ಸರ್ವ ವೃತ್ತಿ, ಸರ್ವ ಭಾವನೆಗಳೆಲ್ಲ ಲಿಂಗಪೂಜೆಯಲ್ಲಿಯೇ ಲಯವಾಗಲಾರಂಭಿಸಿದವು. ಶ್ರೀ ಪ್ರಭು ದೇವರು ನುಡಿದ ಈ ಕೆಳಗಿನ ವಚನದಂತೆಯೇ ಆಗ ಶಿವಯೋಗಿ ಗಳವರ ಸ್ಥಿತಿಯಿದ್ದಿತೆಂದು ಧಾರಾಳವಾಗಿ ಹೇಳಬಹುದು.

> ಸ್ವಸ್ಥಾನ ಸುಸ್ಥಿರ ಸುಮನ ಮಂಟಪದೊಳಗೆ ನಿತ್ಯ ನಿರಂಜನದ ಪ್ರಭೆಯು ಬೆಳಗು, ಶಿವಯೋಗದನುಭಾವವು, ಏಕಾರ್ಥವಾಗಿ ಗುಹೇಶ್ವರ ನಿಮ್ಮ ಶರಣನು ಅನುಪಮ ಸುಖಿಯಾಗಿರ್ದ.

ಮನಸ್ಸು ನಾನಾ ವಿಷಯಗಳಲ್ಲಿ ಸಂಚರಿಸುವುದುಂಟಷ್ಟೆ. ಅದಕ್ಕೆ ಯೋಗ್ಯವಾದ ಶಿಕ್ಷಣವನ್ನು ಅವ್ಯಾಹತವಾಗಿ ಬಹು ಕಾಲ ಕೊಟ್ಟದ್ದಾದರೆ ಅದು ನಮ್ಮ ಆಧೀನವಾಗುತ್ತದೆ. ಅಭ್ಯಾಸ ಮತ್ತು ವೈರಾಗ್ಯಗಳಿಂದಲೇ ಆ ಮನಸ್ಸನ್ನು ನಮ್ಮ ಆಧೀನದಲ್ಲಿಟ್ಟುಕೊಳ್ಳು ಸಾಧ್ಯ.

ಶ್ರೀ ಶಿವಯೋಗಿಗಳು ೪೬ ವರುಷ ಅಭ್ಯಾಸ ಮತ್ತು ವೈರಾಗ್ಯ ಗಳಿಂದ ಮನಸ್ಸಿಗೆ ಲಿಂಗಪೂಜೆಯಲ್ಲಿ ಆಸಕ್ತವಾಗುವ ಸುಸಂಸ್ಕಾರ ವನ್ನು ಕೊಟ್ಟಿದ್ದರಷ್ಟೆ. ಆದರಿಂದ ಆ ಮನಸ್ಸು ಸುಮನವಾಗಿತ್ತು.

ಇಂತಹ ಒಳ್ಳೆಯ ಮನಸ್ಸು ಮತ್ತು ಶಿವಯೋಗದನುಭವಜ್ಞಾನ ಇವೆರಡೂ ಕೂಡಿದ ಮೇಲೆ ಆನಂದಕ್ಕೆ ಎಣೆಯುಂಟೆ ? ಅಂತೆಯೇ ಇಂತಹ ಶರಣರು ಪರಮ ಸುಖಿಗಳಾಗಿರುತ್ತಾರೆಂದು ಪ್ರಭುದೇವರು ಮೇಲಣ ವಚನದಲ್ಲಿ ಹೇಳಿದ್ದಾರೆ.

ಶ್ರೀ ಶಿವಯೋಗಿಗಳು ಯೋಗಮಂಟಪದಲ್ಲಿ ವಾಸಿಸಲುಪಕ್ರಮಿಸಿದನಂತರ ನಿತ್ಯ ಕ್ರಮಗಳು ಈ ಪ್ರಕಾರ ಪ್ರಾರಂಭವಾದವು: ಪ್ರತಿನಿತ್ಯ ಪ್ರಾತಃಕಾಲ ೪ ಗಂಟೆಗೆ ಶಿವನಾಮಸ್ಮರಣೆ ಮಾಡುತ್ತ ಏಳುವುದು. ಅನಂತರ ಕರಚರಣಾದಿ ಅವಯವಗಳನ್ನು ತೊಳೆದುಕೊಂಡು ಭಸ್ಮಧಾರಣ ಮಾಡಿ ತಮ್ಮ ಯೋಗಮಂಟಪವನ್ನು ಮತ್ತು ಅದರ ಸುತ್ತಲಿನ ಸ್ಥಳವನ್ನು ತಾವೇ ಬಹು ಶುಚಿಯಾಗಿ ಉಡುಗುವುದು.

ಬೆಳಗಾದನಂತರ ಊರ ಹೊರಗೆ ಸಂಚರಿಸಿ ಶೌಚಾದಿ ವಿಧಿಗಳನ್ನು ತೀರಿಸಿಕೊಂಡು ತಮ್ಮ ಬಟ್ಟೆಗಳನ್ನು ತಾವೇ ತೊಳೆದುಕೊಂಡು ಹೂದೋಟದಲ್ಲಿ ಪತ್ರೆಪುಷ್ಪಗಳನ್ನು ಗಿಡಗಳಿಗೆ ಅಪಾಯವಾಗದಂತೆ ಬಹು ಮೆಲ್ಲಗೆ ಉಪಾಯದಿಂದ ಮಿತವಾಗಿಯೇ ಎತ್ತಿಕೊಂಡು ಬಂದು ತಮ್ಮ ಪ್ರಾತಃಕಾಲದ ಪೂಜೆಯನ್ನು ಪೂರೈಸಿಕೊಳ್ಳುತ್ತಿದ್ದರು. ಈ ಆಚರಣೆಯು ಮಹಾನುಭಾವರಾದ ಆ ಬಸವಣ್ಣನವರ ಈ ಕೆಳಗಿನ ವಚನದ ಅರ್ಥವೆಂದು ಹೇಳಬಹುದು.

> **ಹೊತ್ತಾರೆ ಎದ್ದು ಅಗ್ಗವಣಿ ಪತ್ರೆಯ ತಂದು, ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ. ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು ? ಹೊತ್ತು ಹೋಗದೆ ಮುನ್ನ, ಮೃತ್ಯು ಒಯ್ಯದ ಮುನ್ನ ತೊತ್ತು ಗೆಲಸವ ಮಾಡು ಕೂಡಲ ಸಂಗಮದೇವನ.**

ಲಿಂಗಪೂಜೆಯ ಸಾಮಗ್ರಿಗಳು ಬಹು ಮಿತವಾಗಿಯೇ ಇದ್ದವು. ಎಲ್ಲವುಗಳನ್ನೂ ತಿಕ್ಕಿ ತೊಳೆಯುವ ಕಾರ್ಯವು ತಮ್ಮದೇ ಆಗಿದ್ದಿತು. ತಮ್ಮ ಅಥವಾ ಲಿಂಗಪೂಜೆಯ ಯಾವ ಕಾರ್ಯಗಳನ್ನೂ ಅನ್ಯರಿಗೆ ವಹಿಸುತ್ತಿರಲಿಲ್ಲ. ಅತ್ಯಂತ ಮುಪ್ಪಿನಲ್ಲಿಯು ಕೂಡಾ ಇದೇ ಆಚರಣೆಯಿದ್ದಿತು. ಯಾರಾದರೂ ಸೇವೆಗೆ ನೆರವಾದರೆ "ಬೇಡ. ಶಿವನು ಕೈಕಾಲುಗಳನ್ನು ಕೊಟ್ಟಿದ್ದಾನೆ. ಅವು ದುಡಿಯಬೇಕು." ಎಂದು ಹೇಳಿ ತಾವೇ ಎಲ್ಲ ಕಾರ್ಯಗಳನ್ನು ಮಾಡುತ್ತಿದ್ದರು. ಶ್ರೀ ಬಸವಣ್ಣನವರ ಈ ಕೆಳಗಿನ ವಚನಾಭಿಪ್ರಾಯವೇ ಅವರ ಸ್ವಂತಾಚರಣೆಯಲ್ಲಿದ್ದಿತು.

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲು ಮಾಡಿಸಬಹುದೆ ? ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲು ಮಾಡಿಸಬಹುದೆ ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು ಕೂಡಲ ಸಂಗಮದೇವಾ ?

ಪತ್ರೆಪುಷ್ಪಗಳನ್ನು ರಾಸಿಯಾಗಿ ಎಂದೂ ತರುತ್ತಿರಲಿಲ್ಲ. ಯಾರಾದರೂ ತೆಗೆದುಕೊಂಡು ಬಂದು ಅತ್ತಿತ್ತ ಚಲ್ಲಿದರೆ "ಶಿವನು ಕೊಟ್ಟಿದ್ದಾನೆಂದು ಹೀಗೆ ಕೆಡಿಸಬಾಗದು." ಎಂದು ಹೇಳುತ್ತಿದರು. ಬಂಡಿ ತುಂಬ ಪತ್ರೆಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆಯುವ ರೀತಿಯು ಪ್ರಮಥರಂತೆಯೇ ಶಿವಯೋಗಿಗಳಿಗೂ ಮಾನ್ಯವಿರಲಿಲ್ಲ.

ಪತ್ರೆ ಇಲ್ಲದಿದ್ದರೆ ಇಲ್ಲವೆಂದು ಹಾಗೆಯೇ ಲಿಂಗ ಪೂಜೆಯನ್ನು ಮಾಡುತ್ತಿರಲಿಲ್ಲ. ಲಿಂಗಪೂಜೆಯಲ್ಲಿ ಇಂಥ ಯಾವ ಅಲಸಿಕೆಯೂ

ಇರಲಿಲ್ಲ. ಮನೋಹರವಾದ ಒಂದೆರಡು ದಳಗಾಳದರೂ ಇರಲೇಬೇಕು. ಅವು ದೊರೆಯುವ ವರೆಗೂ ಎಲೆಲ್ಲಿಯೋ ಸಂಚರಿಸುತ್ತಿದ್ದ.

ಪುಷ್ಯ ಮಾಘ ಮಾಸಗಳಲ್ಲಿ ಪತ್ರೆ ಗಿಡದ ದಳಗಳು ಉದುರಿ ಹೋಗುವುದಂಟಷ್ಟೆ. ಆಗ ಪತ್ರೆ ದೊರೆಯುವುದು ದುರ್ಲಭ. ಅಂತಹ ಕಾಲದಲ್ಲಿ ಎರಡು ಮೂರಾವರ್ತಿ ಶಿವಯೋಗಿಗಳು ಪತ್ರೆಗಾಗಿ ಶ್ರಮಪಟ್ಟದ್ದು ಬಹು ಜನರ ಸ್ಮರಣೆಯಲ್ಲಿದೆ. ಪಾದದಲ್ಲಿ ಮುಳ್ಳು ನಟ್ಟದ್ದರೂ ಅತ್ತ ಲಕ್ಷಿಸದೆ ಪತ್ರೆಯ ಶೋಧದಲ್ಲಿಯೇ ಸಂಚರಿಸುತ್ತಿದ್ದರು. ಇದನ್ನು ನೋಡಿ ಬಹು ಜನರು ನೊಂದು ಕೊಂಡರು. ಆದರೆ ಆ ಮಹಾತ್ಮರಿಗೆ ಪತ್ರೆ ದೊರೆತೊಡನೆ ಶಿವನು ಕೊಟ್ಟನೆಂದು ಅತ್ಯಾನಂದ ಹೊಂದುತ್ತಿದ್ದರು.

ಲಿಂಗಪೂಜೆಯ ವಿಷಯದಲ್ಲಿ ಎಳ್ಳಷ್ಟಾದರೂ ಯಾವ ಕಾಲದಲ್ಲಿಯೂ ಅಲಸಿಕೆಯಿರಲಿಲ್ಲ. ಆ ವಿಚಾರದಲ್ಲಿ ತುಂಬಾ ಛಲವುಳ್ಳವರೇ ಆಗಿದ್ದರೆಂದು ಹೇಳಬಹುದು. ಹೀಗೆ ಛಲವಿರಬೇಕೆಂದೇ ಪ್ರಮಥರು ಹೇಳಿದ್ದಾರೆ.

> ಆದಂತೆ ಆಗಲಿ, ಮಾದಂತೆ ಮಾಣಲಿ, ಎನಲಾಗದು. ನೇಮದಾತಂಗೆ ಛಲಬೇಕು ಛಲಬೇಕಯ್ಯ. ಹಿಡಿದುದ ಬಿಡಲಾಗದು. ಹುಲಿಗೆರೆಯ ವರದ ಸೋಮನಾಥನ ಮನ ಮುಟ್ಟಿದ ಧೀರನು ಏತಕ್ಕೂ ಸೋಲುವವನಲ್ಲ.

ಆದಕಾರಣ ಲಿಂಗಪೂಜೆಯು ಆದಂತಾಗಲಿ, ಎಂದು ಆ ಶಿವಲಿಂಗದೇವನ ಸೇವೆಯಲ್ಲಿ ಅಲಸಿಕೆಯನ್ನು ಹೊಂದಿರಲಿಲ್ಲ. ಎಲ್ಲಿ ಭಕ್ತಿಯುಂಟೋ ಅಲ್ಲಿ ಅಲಸಿಕೆಯುಂಟೆ ? ನಾವು ಯಾರಲ್ಲಿ ಪ್ರೇಮಾದರಗಳನ್ನು ಅಂತಃಕರಣಪೂರ್ವಕವಾಗಿಟ್ಟಿರುತ್ತೇವೆಯೋ ಅವರ

ಸೇವಾಸತ್ಕಾರಗಳಲ್ಲಿ ನಾವು ಸೋಮಾರಿಗಳಾಗುವೆವೋ ? ಹಾಗೆ ಸೋಮಾರಿತನವುಳ್ಳವರು ನಿಜವಾದ ಪ್ರೇಮಿಗಳೆನ್ನಬಹುದೆ ? ಆ ಶಿವಲಿಂಗದೇವನಲ್ಲಿ ಅಗಾಧವಾದ ಭಕ್ತಿಯುಳ್ಳವರಾಗಿದ್ದುದರಿಂದ ಯಾವ ಸೇವೆಯನ್ನು ಸ್ವಲ್ಪವೂ ಕೊರತೆಯಿಲ್ಲದೆ ಮಾಡುತ್ತಿದ್ದರು.

**ಛಲವಿರಬೇಕು ಭಕ್ತಿಯ ಮಾಡುವಲ್ಲಿ. ಹಿಡಿದು ಬಿಡೆನೆಂಬ ಛಲವಿರಬೇಕು. ನಿತ್ಯ ನೇಮದಲ್ಲಿ ಹಿಡಿದು ಬಿಡೆನೆಂಬ ಛಲವಿರಬೇಕು. ನಮ್ಮ ಅಖಂಡೇಶ್ವರ ಲಿಂಗವ ಕೂಡಿ ಅಗಲಬಾರದೆಂಬ ನೈಷ್ಠೆಯಲ್ಲಿ.**

ಶ್ರೀ ಷಣ್ಮುಖಸ್ವಾಮಿಗಳು ಹೇಳಿರುವ ಮೇಲಣ ವಚನದಂತೆಯೇ ಲಿಂಗಪೂಜೆಯ ನಿತ್ಯ ನಿಯಮವನ್ನು ಶ್ರೀ ಶಿವಯೋಗಿಗಳು ತಪ್ಪದೇ ಆಚರಿಸುವವರಾಗಿದ್ದರು. ಬೆಳಗಿನ ಪೂಜೆಯನಂತರ ಮತ್ತೆ ಮಧ್ಯಾಹ್ನದ ಪೂಜೆ. ಆ ಮೇಲೆ ಅಪ್ಪನವರ ವಚನಾನುಭವ. ಆ ಬಳಿಕ ಸಾಯಂಕಾಲದ ಪೂಜೆಗೆ ಹೊರಡುವುದು. ಈ ಪ್ರಕಾರ ಲಿಂಗಪೂಜೆಯ ಕಾರ್ಯವು ಸಕಾಲಕ್ಕೆ ತಪ್ಪದೇ ಜರುಗುತ್ತಿದ್ದಿತು.

ಪುರಾಣ, ಕೀರ್ತನೆ, ಉಪನ್ಯಾಸ ಮುಂತಾದವು ಸಾಯಂಕಾಲ ಪ್ರಾರಂಭವಾಗಿದ್ದರೂ ಶಿವಯೋಗಿಗಳ ಪೂಜೆಯ ಕಾಲದೊಳಗಾಗಿಯೇ ಅವು ಪೂರೈಸುತ್ತಿದ್ದವು. ಒಂದು ವೇಳೆ ಪೂರೈಸದಿದ್ದರೆ ಅವರು ಸಕಾಲಕ್ಕೆ ತಮ್ಮ ಕಾರ್ಯಕ್ಕೆ ಹೊರಟುಬಿಡುತ್ತಿದ್ದರು.

ಕಾಯಾ ವಾಚಾ ಮನಸ್ಸುಗಳಿಂದ ಮೊದಲು ಪರಮ ಪವಿತ್ರರಾಗಿ ನೈತಿಕ ಬಲದಿಂದ ಮನಸ್ಸನ್ನು ಸ್ವಾಧೀನಪಡಿಸಿಕೊಂಡು ಅನಂತರ ಅದನ್ನು ಈ ಪ್ರಕಾರ ಶಿವಲಿಂಗ ದೇವನ ಸೇವೆಗೆ ಹಚ್ಚಿದರೆ ಆ ನಿಷ್ಠೆಯ ಬೆಳಕು ಎಲ್ಲೆಲ್ಲಿಯೂ ಬೆಳಗದೆ ಬಿಟ್ಟೀತೆ ? ಬೆಳಕು ತಾನು ಕಾಣಿಸಿಕೊಳ್ಳಬಾರದೆಂದು ಕತ್ತಲೆಯಲ್ಲಿ ಅಡಗಿಕೊಂಡಿರುವುದು

ಶಕ್ಯವೆ ? ಶಿವಯೋಗಿಗಳ ಅಪಾರವಾದ ಆ ಲಿಂಗನಿಷ್ಠೆಯ ಬೆಳಕೇ ಅಸಂಖ್ಯ ಭಕ್ತರನ್ನು ಎಳೆದುಕೊಳ್ಳಲಾರಂಭಿಸಿತು. ಅಥಣಿಯು ಪರಮ ಪವಿತ್ರ ಕ್ಷೇತ್ರಸ್ಥಳವಾಯಿತು. ಪ್ರತಿನಿತ್ಯ ಅನೇಕ ಭಾವಿಕರು ಬೇರೆ ಬೇರೆ ಭಾಗಗಳಿಂದ ತಂಡೋಪತಂಡವಾಗಿ ಬರಲಾರಂಭಿಸಿದರು.

ನಿಷ್ಠೆಯುಳ್ಳಭಕ್ತ ನಟ್ಟನಡವಿಯಲ್ಲಿರ್ದಡೇನು ? ಅದು ಪಟ್ಟಣವೆಂದೆನಿಸುವುದು. ನಿಷ್ಠೆಯಿಲ್ಲದ ಭಕ್ತ ಪಟ್ಟಣ ದಲ್ಲಿದ್ದರೂ ಅದು ನಟ್ಟನಡವಿ ಕಾಣಾ ರಾಮನಾಥಾ.

ಶ್ರೀ ದಾಸಿಮಯ್ಯನವರು ನುಡಿದ ಮೇಲಣ ವಚನದಲ್ಲಿಯ ಮೊದಲನೆಯ ಸಿದ್ಧಾಂತವು ಶ್ರೀ ಶಿವಯೋಗಿಗಳ ಕಾಲದಲ್ಲಿ ಅಥಣಿಗೆ ತುಂಬಾ ಅನ್ವಯಿಸುವಂತಿದ್ದಿತು. ಭಕ್ತಿಭಾವವುಳ್ಳ ಎಲ್ಲ ಮತಪಂಥ ದವರೂ ಶಿವಯೋಗಿಗಳ ದರ್ಶನ ಹೊಂದುವುದು ಮಹದ್ಭಾಗ್ಯವೆಂದೇ ತಿಳಿದಿದ್ದರು. ಅಥಣಿಗೆ ಬಂದ ಲೋಕಮಾನ್ಯ ಟಿಳಕರಂಥ ಮಹಾ ದೇಶಭಕ್ತರಾಗಲಿ, ಅಥವಾ ಬೇರೆ ದೊಡ್ಡ ದೊಡ್ಡ ಅಧಿಕಾರಿಗಳಾಗಲಿ, ಪ್ರಸಿದ್ಧ ವ್ಯಾಪಾರಿಗಳಾಗಲಿ, ಯಾರು ಯಾವ ಮತಪಂಥದವರಿದ್ದರೂ ಶಿವಯೋಗಿಗಳ ದರ್ಶನ ಹೊಂದಬೇಕೆಂದೇ ಇಚ್ಛಿಸುತ್ತಿದ್ದರು. ಈ ಪ್ರಕಾರ ಕೇವಲ ಲಿಂಗಪೂಜೆಯ ನಿಷ್ಠೆಯಿಂದಲೇ ಹೀಗೆ ಸಕಲ ರಿಗೂ ಪರಮಪೂಜ್ಯ ವಿಭೂತಿಗಳಾದ ದನ್ನು ನೋಡಿದರೆ ಬಸವಣ್ಣ ನವರ ಈ ಕೆಳಗಿನ ವಚನದ ಸತ್ಯತೆಯು ಸ್ಪಷ್ಟವಾಗುತ್ತದೆ.

ಹೊಯ್ಸರೆ ಹೊಯ್ಗಳು ಕೈಮೇಲೆ, ಬಯ್ಸರೆ ಬಯ್ಗಳು ಕೈಮೇಲೆ. ಹಿಂದಣ ಜನನವೇನಾದಡಾಗಲಿ, ಇಂದಿನ ಭೋಗವು ಕೈಮೇಲೆ. ಕೂಡಲ ಸಂಗಮದೇವಯ್ಯಾ ನಿಮ್ಮ ಪೂಜಿಸಿದ ಫಲವು ಕೈಮೇಲೆ.

ಹಿಂದಿನ ಪ್ರಮಥರ ವಚನದಂತೆ ನಿಷ್ಠೆಯಿಂದ ನಡೆದ ಕಾರಣ ಶ್ರೀ ಶಿವಯೋಗಿಗಳು ಹೇಗೆ ಇಂದಿನ ಪ್ರಮಥರಾದರೋ ಹಾಗೆಯೇ

ಇನ್ನು ಮುಂದೆ ಯಾರು ಈ ಪ್ರಕಾರ ನಿಷ್ಠೆಯಿಂದ ನಡೆಯುವರೋ ಅವರು ಕೂಡಾ ಮುಂದಣ ಪ್ರಮಥರಾಗಲು ಅಡ್ಡಿಯಿಲ್ಲ. ಏಕೆಂದರೆ ತಾವು ಭಾವಿಸುವಂತೆ ಲಿಂಗದಲ್ಲಿ ದೈವತ್ವವು ಹಿಂದೆ ಉಂಟಾದಂತೆ ಈಗಲೂ ಉಂಟಾಗುತ್ತದೆ. ಇನ್ನು ಮುಂದೆಯೂ ಉಂಟಾಗುವುದು.

ಕಾಮಕ್ರೋಧಾದಿ ಮನೋವೃತ್ತಿಗಳು ಹೇಗೆ ನಮ್ಮಲ್ಲಿಯೇ ಉಂಟಾಗಿ ಅವು ನಮ್ಮ ನಾಶಕ್ಕೇನೇ ಕಾರಣವಾಗುತ್ತವೆಯೋ ಹಾಗೆಯೇ ದಯೆ, ಶಾಂತಿ, ಭಕ್ತಿ ಮೊದಲಾದ ಮನೋವೃತ್ತಿಗಳು ಕೂಡಾ ನಮ್ಮಲ್ಲಿಯೇ ಉಂಟಾಗಿ ಅವು ನಮ್ಮ ಉನ್ನತಿಗೆ ಕಾರಣ ವಾಗುತ್ತವೆ. ಕಾಮಾದಿ ವಿಕಾರಗಳುಂಟಾಗಲು ಹೇಗೆ ಬಾಹ್ಯ ಉಪಕರಣಗಳು ಸಾಧನವಾಗುತ್ತವೆಯೋ ಮತ್ತು ಅವುಗಳಲ್ಲಿ ನಮ್ಮ ಭಾವ ಬಲಿತರೆ ಮಾತ್ರ ಅವು ಆಯಾಯ ಸ್ಥಿತಿಗಳನ್ನುಂಟು ಮಾಡು ತ್ತವೆಯೋ ಹಾಗೆಯೇ ದೈವೀ ಶಕ್ತಿಯು ಕೂಡಾ ನಮ್ಮಲ್ಲುಂಟಾಗಲು ಲಿಂಗಪೂಜಾದಿ ಬಾಹ್ಯಕ್ರಿಯೆಗಳು ಬೇಕೇ ಬೇಕು. ಮತ್ತು ಆ ಕ್ರಿಯೆಗಳಲ್ಲಿ ದೈವೀ ಭಾವನೆಯೂ ದೃಢಗೊಂಡಿರಬೇಕು. ಹಾಗಾದ ರೇನೇ ಲಿಂಗಪೂಜೆಯು ಇಷ್ಟು ಫಲಕಾರಿಯಾಗುತ್ತಿದೆ.





೫ ನೆಯ ಪ್ರಕರಣ

# ಜಂಗಮ ಜ್ಯೋತಿ

*

ಶ್ರೀ ಶಿವಯೋಗಿಗಳು ಜಂಗಮವರೇಣ್ಯರಾಗಿದ್ದರಷ್ಟೆ. ಆದುದರಿಂದ ಅವರ ದಿವ್ಯತರವಾದ ಆತ್ಮಜ್ಯೋತಿಯು ಎಲ್ಲೆಲ್ಲಿಯೂ ಪ್ರಕಾಶಿಸಿದ್ದಿತು. ಆ ಮಹಾ ಪೂಜ್ಯರ ಸನ್ನಿಧಿಯಲ್ಲಿ ತಮ್ಮ ಸೇವೆಯನ್ನು ಸಮರ್ಪಿಸಿ ಕೃತಾರ್ಥರಾಗಬೇಕೆಂದು ನಾನಾ ಭಾಗಗಳಿಂದ ಅನೇಕ ಪಂಡಿತರು ತಾವಾಗಿಯೇ ಅಲ್ಲಿಗೆ ಬಂದು ಪುರಾಣ, ಕೀರ್ತನೆ ವ್ಯಾಖ್ಯಾನಗಳ ಮೂಲಕ ಧರ್ಮ ಜಾಗೃತಿಯನ್ನು ಮಾಡುತ್ತಿದ್ದರು.

ಶ್ರೀ ಶಿವಯೋಗಿಗಳ ಸನ್ನಿಧಿಯಲ್ಲಿ ಗಣಾರಾಧನೆಯನ್ನು ಮಾಡಿಸಿ ಕೃತಾರ್ಥರಾಗಬೇಕೆಂದು ಅನೇಕ ಧನಿಕರು ಅಥಣಿ ಗಚ್ಚಿನ ಮಠಕ್ಕೆ ಬಂದು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಆದುದರಿಂದ ಪ್ರತಿನಿತ್ಯ ಅನೇಕ ಜನಗಳಿಗೆ ತನುಮನಗಳ ತಾಪನಿವಾರಣೆಗೆ ಶಿವಪ್ರಸಾದ ಮತ್ತು ಶಿವಾನುಭವ ಗೋಷ್ಠಿಗಳು ಲಭಿಸುತ್ತಿದ್ದವು.

ಮಹಾ ಧನಿಕರು ಎಷ್ಟೋ ಹಣವನ್ನು ವೆಚ್ಚಮಾಡಿ ಅನೇಕ ಸೌಲಭ್ಯಗಳನ್ನು ಕಲ್ಪಿಸಿದರು ಕೂಡಾ ನಡೆಯಲಾರದಂತಹ ವಿತರಣೆ ಸೌಕರ್ಯ, ಸದ್ಬೋಧಗಳೆಲ್ಲಾ ಇಲ್ಲಿ ಪ್ರತಿನಿತ್ಯ ಜರಗುತ್ತಿದ್ದುದೇಕೆ ? ಮಂತ್ರತಂತ್ರಗಳನ್ನು ಮಾಡುತ್ತಿರಬಹುದು. ಇಲ್ಲವೇ ಔಷಧೋಪಚಾರಗಳನ್ನು ತಿಳಿಸುತ್ತಿರಬಹುದು. ಅಥವಾ ಜನರ ಇಷ್ಟಾನುಸಾರ ಶುಭ ಸಂಗತಿಗಳನ್ನು ಸೂಚಿಸುತ್ತಿರಬಹುದು. ಆದಕ್ಕೋಸ್ಕರ ಭಾವಿಕರು ಹೀಗೆ ತಂಡೋಪತಂಡವಾಗಿ ಬರುತ್ತಿದ್ದರೆಂದು ಯಾರಾ

ದರೂ ಯೋಚಿಸಿದರೆ ಅದು ಶುದ್ಧ ತಪ್ಪು. ಇಂತಹ ಯಾವ ಕಾರ್ಯ ಗಳಿಗೂ ಅಲ್ಲಿ ಎಳ್ಳಷ್ಟಾದರೂ ಅವಕಾಶವಿರಲಿಲ್ಲ.

ಶಿವಯೋಗಿಗಳ ದರ್ಶನಕ್ಕೆ ಪಂಡಿತರು ಬಂದರೂ ಒಂದೇ ರೀತಿ. ಪಾಮರರು ಬಂದರೂ ಒಂದೇ ರೀತಿ. ಧನಿಕರು ಬಂದರೆ ಅವರ ವಿಚಾರದಲ್ಲಿ ಶಿವಯೋಗಿಗಳು ಹೆಚ್ಚು ಲಕ್ಷಿಸುತ್ತಿರಲಿಲ್ಲ. ದರಿದ್ರರು ಬಂದಿದ್ದಾರೆಂದು ಉಪೇಕ್ಷಿಸುತ್ತಿರಲಿಲ್ಲ. ಒಬ್ಬರ ಸಂಗಡ ಒಂದು ವಿಚಾರವಾಗಿ ಸಂಭಾಷಿಸುವ ರೂಢಿಯೇ ಬಹು ಕಡಿಮೆ. ಎಂದ ಮೇಲೆ ಬೇರೆ ಬೇರೆ ಸಂಗತಿಗಳ ಪ್ರಸ್ತಾಪಕ್ಕೆ ಅವಕಾಶವೆಲ್ಲಿ ?

ಯಾರಿಗೂ ಎಂದೂ ಏನನ್ನೂ ಕೇಳಿದುದಿಲ್ಲ. ಲಿಂಗಪೂಜೆಯ ವ್ರತವೇ ವ್ರತ. ಇಂತಹ ದಿವ್ಯತರವಾದ ಪ್ರಮಥಾಚಾರವು ಆ ಮಹಾತ್ಮರಲ್ಲಿ ಅಳವಟ್ಟಿದ್ದರಿಂದಲೇ ಸಕಲ ಸತ್ಕಾರ್ಯಗಳೂ ಅಲ್ಲಿ ತಾವಾಗಿಯೇ ಜರುಗುತ್ತಿದ್ದವು ಶ್ರೀ ಸಕಳೇಶ ಮಾದರಸರು ಹೇಳಿದ ಈ ಕೆಳಗಿನ ವಚನಾಭಿಪ್ರಾಯಕ್ಕೆ ಶಿವಯೋಗಿಗಳ ಸನ್ನಿಧಿಯಲ್ಲಿ ನಡೆಯುತ್ತಿದ್ದ ಆಗಿನ ಕಾರ್ಯಗಳು ದೃಷ್ಟಾಂತವಾಗಿದ್ದವೆಂದು ಹೇಳಬಹುದು.

> ಅದು ಬೇಕು, ಇದು ಬೇಕೆಂಬ ಎದೆಗುದಿಹತನ ಬೇಡ. ಸಮಾಧಾನಿಯಾಗಿರ್ದಡೆ ಸಾಕು. ಪಡಿಪದಾರ್ಥ ತಾನಿದ್ದೆಡೆಗೆ ಬಹುದು. ನಿಧಿ ನಿಕ್ಷೇಪಂಗಳು ಇರ್ದೆಡೆಗೆ ಬಹವಯ್ಯಾ. ಹೃದಯ ಶುದ್ಧವಾಗಿ ಸಕಳೇಶ್ವರ ದೇವ ಶರಣೆಂದಡೆ ನಿಜಪದವನೀವನು.

ಪ್ರಾಪಂಚಿಕ ಪದಾರ್ಥಗಳು ನಮಗೆ ಬೇಕೆಂದು ನಾವು ಅವುಗಳ ಬೆನ್ನು ಹತ್ತಿದರೆ ಅವು ಓಡಿ ಹೋಗುತ್ತವೆ. ಅವುಗಳನ್ನು ಉಪೇಕ್ಷಿಸಿ ನಾವು ಪಾರಮಾರ್ಥದ ಕಡೆಗೆ ತಿರುಗಿದರೆ ಅವು ನಮ್ಮ

ಬೆನ್ನು ಹತ್ತಿ ಬರುತ್ತವೆ. ಶಿವಯೋಗಿಗಳು ಧನಧಾನ್ಯಾದಿಗಳನ್ನು ಉಪೇಕ್ಷಿಸಿ ಶಿವನ ಕಡೆಗೆ ತಿರುಗಿದ್ದರು. ಆದುದರಿಂದಲೇ ಅವರಿದ್ದ ಲ್ಲಿಗೆ ಅವು ರಾಸಿ ರಾಸಿಯಾಗಿ ಎಲ್ಲೆಲ್ಲಿಂದಲೋ ಬರುತ್ತಿದ್ದವು.

ಹೀಗಿರಬೇಕಾದುದೇ ಜಂಗಮ ಲಕ್ಷಣ. ಜಂಗಮ ಸ್ವಾಮಿಯು ತನಗಾಗಿ ಜೀವಿಸುವುದಿಲ್ಲ. ಲೋಕೋಪಕಾರಕ್ಕಾಗಿಯೇ ಜೀವಿಸು ವುದು.

ಗಿಡಗಳು ಗಾಳಿ ಬಿಸಿಲುಗಳ ತಾಪವನ್ನು ತಾಳಿಕೊಂಡು ಫಲ ಪುಷ್ಪಗಳನ್ನು ಹೊತ್ತುಕೊಂಡಿರುವುದೇಕೆ ? ತಮಗಾಗಿಯೇ ? ಅಲ್ಲವೇ ಅಲ್ಲ. ತಮ್ಮಲ್ಲಿ ಬರುವ ಪ್ರಾಣಿಗಳಿಗಾಗಿಯೇ ಅವು ಹೇಗೆ ಆ ಫಲ ಪುಷ್ಪಗಳನ್ನು ಹೊತ್ತುಕೊಂಡಿರುತ್ತವೆಯೋ ಹಾಗೆಯೇ ಅನೇಕ ಪರಜಂಗಮರು ಕೂಡಾ ತಮ್ಮಲ್ಲಿಗೆ ಒರುವ ಭಕ್ತರ ಉದ್ಧಾರಕ್ಕಾ ಗಿಯೇ ತಾವು ಲಿಂಗಪೂಜಾದಿ ಸತ್ಕಾರ್ಯಗಳನ್ನು ವಹಿಸಿಕೊಂಡಿರು ತ್ತಾರೆ! ಹೂವು ಅರಳಿದೊಡನೆ ಅದರ ಗಂಧವು ಸುತ್ತಲೂ ಹರಡು ವುದು ಹೇಗೆ ಸ್ವಾಭಾವಿಕವೋ ಹಾಗೆಯೇ ಲಿಂಗಪೂಜಾದಿ ಸತ್ಕಾರ್ಯ ಗಳು ಇಂಥ ಮಹಾತ್ಮರಲ್ಲುಂಟಾದರೆ ಅವುಗಳ ಸಾತ್ವಿಕ ಫಲಗಳು ತಾವಾಗಿಯೇ ತೋರುವುದೂ ಸಹಜ. ಆದಕಾರಣ ಜಂಗಮ ಸ್ವಾಮಿಗಳಲ್ಲಿ ಕೆಲವು ಮಹಾತ್ಮರು ಫಲ ಪುಷ್ಪಗಳ ವೃಕ್ಷಗಳಂತಿರು ತ್ತಾರೆ.

ಮೋಡಗಳು ನೀರನ್ನು ತಮಗಾಗಿ ಹೊತ್ತುಕೊಂಡು ತಿರುಗಾಡದೆ ಪ್ರಾಣಿಗಳ ಹಿತಾರ್ಥವಾಗಿ ಎಲ್ಲೆಲ್ಲಿಯೋ ಮಳೆಗರೆಯಲು ಹೇಗೆ ಸಂಚರಿಸುತ್ತಿರುತ್ತವೆಯೋ ಹಾಗೆಯೇ ಕೆಲವು ಜಂಗಮ ಸ್ವಾಮಿಗಳು ಲೋಕಹಿತಾರ್ಥವಾಗಿಯೇ ಸಂಚರಿಸಿ ಧನ ಧಾನ್ಯಾದಿಗಳನ್ನು ಕೂಡಿಸುತ್ತಾ ಅವೆಲ್ಲವನ್ನೂ ಜನಾಂಗದ ಕ್ಷೇಮಕ್ಕಾಗಿಯೇ ಸೂರೆ ಮಾಡುತ್ತಿರುತ್ತಾರೆ. ಇಂತಹ ಜಂಗಮ ಸ್ವಾಮಿಗಳು ಮೋಡಗಳಂತೆ.

ಈ ಪ್ರಕಾರ ನಿಜ ಜಂಗಮ ಸ್ವಾಮಿಗಳ ಉಭಯವಿಧ ಪ್ರವೃತ್ತಿಗಳಲ್ಲಿ ಶ್ರೀ ಶಿವಯೋಗಿಗಳವರು ಫಲವೃಕ್ಷಗಳಂತೆ ಒಂದೇ ಕಡೆಗಿದ್ದು ಲೋಕ ಕಲ್ಯಾಣವನ್ನು ಮಾಡುವವರಾಗಿದ್ದರು.

ಈ ಮಹಾ ಪೂಜ್ಯರ ಸನ್ನಿಧಿಯಲ್ಲಿ ಅನೇಕರು ಅನೇಕ ಮಹತ್ಕಾರ್ಯಗಳನ್ನು ತಾವಾಗಿಯೇ ಬಂದು ಮಾಡುತ್ತಿದ್ದರು. ಅನೇಕ ಸಾರೆ ಮಹಾ ಮಹಾ ಪುರಾಣ ಶ್ರವಣ ಸಮಾರಂಭಗಳನ್ನು ನಡೆಸಿದಂತೆಯೇ ಒಂದು ಸಾರೆ ೬೩ ಪುರಾತನರ ಪೂಜೆಯ ಮಹ ತ್ಕಾರ್ಯವನ್ನೂ ಅನೇಕ ಭಕ್ತರು ಸೇರಿ ಶ್ರೀ ಶಿವಯೋಗಿಗಳವರ ಸನ್ನಿಧಿಯಲ್ಲಿ ಜರುಗಿಸಿದರು. ಆ ಕಾಲಕ್ಕೆ ಕೂಡಿದ್ದ ಎಷ್ಟೋ ದರಿದ್ರರಿಗೂ ಅಂಗಹೀನರಿಗೂ ಶಿವಯೋಗಿಗಳ ಹಸ್ತ ಸ್ಪರ್ಶಮಾಡಿಸಿ ಸಹಸ್ರಾವಧಿ ರೂಪಾಯಿಗಳನ್ನು ಅನೇಕ ಧನಿಕರು ಸೂರೆಮಾಡಿಸಿದರು.

ಆ ಪೂಜೆಯ ಕಾಲದ ವೈಭವ ಅಸಾಧಾರಣವಾಗಿದ್ದಿತು. ಜನರು ದಾನ ಮಾಡುವುದರಲ್ಲಿ ಬಹು ಉತ್ಸಾಹಭರಿತರಾಗಿದ್ದರು. ಇವರಲ್ಲಿ ಫಲಾಪೇಕ್ಷಿಗಳೇ ಹೆಚ್ಚಾಗಿರುವುದು ಸ್ವಾಭಾವಿಕವಷ್ಟೆ. ಅದಕ್ಕಾಗಿ ಅವರು ತಾವು ದಾನ ಮಾಡಿದ್ದು ಶ್ರೀ ಶಿವಯೋಗಿಗಳವರ ದೃಷ್ಟಿಗೆ ಬೀಳಬೇಕೆಂಬ ಕುತೂಹಲವುಳ್ಳವರಾಗಿಯೇ ಇರುತ್ತಿದ್ದರು. ಶಿವಯೋಗಿಗಳ ಮುಂದುಗಡೆ ಆ ದಿನ ರೂಪಾಯಿಗಳನ್ನು ತಂದು ತಂದು ಅರ್ಪಿಸುವುದರಲ್ಲಿ ತೆರಪಿರಲಿಲ್ಲ.

ಪುರಾತನರ ಪೂಜಾಮಂಡಲದ ವ್ಯವಸ್ಥಾಪಕರು ಅಲ್ಲಿ ಅರ್ಪಿಸುತ್ತಿದ್ದವರ ಹೆಸರನ್ನೂ ಆ ಹಣವಿನ ಸಂಖ್ಯೆಯನ್ನೂ ಬರೆದು ಕೊಂಡು ತಮ್ಮ ಸ್ವಾಧೀನ ತೆಗೆದುಕೊಳ್ಳುತ್ತಿದ್ದರು. ಆ ದಿನ ಸಾಯಂಕಾಲಕ್ಕೆ ಜನರ ಗಲಾಟೆ ಸ್ವಲ್ಪ ಕಡಿಮೆಯಾಯಿತು. ಶಿವ ಯೋಗಿಗಳ ಮುಂದೆ ಯಾರೋ ಸಾಧಾರಣ ೨೦೦ ರೂಪಾಯಿಗಳನ್ನು ಇಟ್ಟು ಹೋದರು. ಆಗ ಆ ವ್ಯವಸ್ಥಾಪಕರಿರಲಿಲ್ಲ. ಆ ರೂಪಾಯಿಗಳು

ಅಲ್ಲೇ ಇದ್ದವು. ಆಗ ಶಿವಯೋಗಿಗಳ ಹತ್ತಿರ ಇದ್ದ ಒಬ್ಬ ಸೇವಕ ನನ್ನು ಕರೆದು ಹೀಗೆ ಅಪ್ಪಣೆ ಮಾಡಿದರು.

**ಅಕೋ ಅಲ್ಲಿ ಒಬ್ಬರು ನಿಂತಿದ್ದಾರೆ. ಶಿವನೂ ಇಲ್ಲಿ ರೂಪಾಯಿ ಕೊಟ್ಟಿದ್ದಾನೆ. ಅವರಿಗೆ ಕೊಟ್ಟುಬಿಡು.**

ಅಪ್ಪಣೆಯ ಪ್ರಕಾರ ಸೇವಕನು ಕೊಟ್ಟುಬಿಟ್ಟನು. ಇಂತಹ ಅದ್ವಿತೀಯ ಸ್ಥಿತಿಯು ಎಲ್ಲರಿಗೂ ಸಾಧ್ಯವೆ? ಬಸವಣ್ಣನವರು ಈ ವಿಚಾರವಾಗಿ ಹೀಗೆ ಹೇಳಿದ್ದಾರೆ.

> **ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾರಿಂಗಳ ವಡುವುದಯ್ಯಾ ? ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವ ರಿಲ್ಲ. ಪ್ರಮಾದ ವಶದಿಂ ಬಂದರೆ ಹುಸಿಯೆನೆಂಬುವರಿಲ್ಲ. ದುರಾಶೆ, ನಿರ್ಭಯ, ಕೂಡಲ ಸಂಗಮದೇವ ನೀನೊಲಿದ ಶರಣಂಗಲ್ಲದಿಲ್ಲ.**

ತಾನಾಗಿಯೇ ಹಣ ಬಂದರೆ ಬೇಡವೆನ್ನುವವರುಂಟೆ ? ಜೀವ ಹೋಗುವ ಸಮಯ ಬಂದಾಗ ಸುಳ್ಳು ಹೇಳಿದರೆ ಬದುಕುತ್ತೇನೆಂದು ಗೊತ್ತಾದ ಮೇಲೆ ಸುಳ್ಳು ಹೇಳಲು ಒಪ್ಪದಿರುವವರುಂಟೆ ? ಇಂಥ ನಿರಾಶೆ, ನಿರ್ಭಯ ಯಾರಿಗಿರುವುವು ? ಎಂದು ಬಸವಣ್ಣನವರು ತಾವೇ ಪ್ರಶ್ನೆಮಾಡಿ ಶಿವನ ಕೃಪೆಗೆ ಪಾತ್ರರಾದ ಮಹಾತ್ಮರಲ್ಲಿ ಮಾತ್ರ ಇಂಥ ನಿರಾಶೆ, ನಿರ್ಭಯಗಳಿರುತ್ತವೆಂದು ಉತ್ತರವನ್ನು ಹೇಳಿದ್ದಾರೆ. ಈ ಎರಡೂ ಸಂಗತಿಗಳು ಶಿವಯೋಗಿಗಳವರಲ್ಲಿ ದೃಢತರವಾಗಿದ್ದ ವೆಂದು ಈ ವರೆಗಿನ ವಿವೇಚನೆಯಿಂದ ಸ್ಪಷ್ಟವಾಗುವುದಿಲ್ಲವೆ ?

ಲಿಂಗಪೂಜೆಯಂತೆಯೇ ಜಂಗಮ ದಾಸೋಹದಲ್ಲಿಯೂ ಶಿವ ಯೋಗಿಗಳಿಗೆ ತುಂಬಾ ಆಸಕ್ತಿಯಿದ್ದಿತು. ಈ ಮಹಾನುಭಾವರ

ಕೀರ್ತಿಯನ್ನು ಕೇಳಿ ಅನೇಕ ಪೂಜ್ಯರ ಅನೇಕ ಸ್ಥಳಗಳಿಂದ ಬರುತ್ತಿದ್ದರು. ಒಂದು ಸಾರಿ ಒಬ್ಬ ವೃದ್ಧ ಜಂಗಮ ಸ್ವಾಮಿಗಳು ಶಿವಯೋಗಿಗಳ ಹತ್ತಿರ ಬಂದರು. ಆಗ ೪-೫ ತಾಸು ಹೊತ್ತಾಗಿದ್ದಿತು. ಶಿವಯೋಗಿಗಳನ್ನು ಏಕವಚನದಿಂದಲೇ ಮಾತನಾಡಿಸಿ ನನಗೆ ಹಸಿವಾಗಿದೆ; ಹೋಳಿಗೆ ಸೀಕರಣೆ ಉಣಿಸಬೇಕೆಂದು ತಿಳಿಸಿ ಏನೇನೋ ಮಾತನಾಡಿದರು. ಅವರ ಸ್ಥಿತಿಗತಿಯೂ ಹೇಗೇಗೋ ಇದ್ದಿತು. ಆದರೂ ಶಿವಯೋಗಿಗಳು ಹೀಗೆ ಅರಿಕೆ ಮಾಡಿಕೊಂಡರು.

"ಸ್ನಾನ ಪೂಜೆ ಪೂರೈಸಿರಿ. ಶಿವನು ಕೊಟ್ಟಂತಾಗಲಿ."

ಆ ವೃದ್ಧ ಜಂಗಮರು ಸ್ನಾನಕ್ಕೆ ತೆರಳಿದರು. ಅನಂತರ ಸ್ವಲ್ಪ ಹೊತ್ತಿನಲ್ಲಿಯೇ ಮಠಕ್ಕೆ ಮಾವಿನ ಹಣ್ಣಿನ ಒಂದು ಪುಟ್ಟಿ ಬಂದಿತು. ಮುಂಬೈಯಿಂದ ಒಬ್ಬ ಭಕ್ತರು ಮಠಕ್ಕೆ ಕಳುಹಿಸಿದ್ದರು. ಶೇಡ ಬಾಳ ಸ್ಟೇಶನ್ನಿನಿಂದ ಒಬ್ಬರು ಅದೇ ಸಮಯಕ್ಕೆ ತಂದು ಕೊಟ್ಟರು. ಈ ಸಂಗತಿಯನ್ನು ಆಗ ಶಿವಯೋಗಿಗಳಲ್ಲಿ ಅರಿಕೆ ಮಾಡಿಕೊಂಡದ್ದಾಯಿತು. ಆಗ ಹೀಗೆ ಅಪ್ಪಣೆಯಾಯಿತು. "ಒಳ್ಳೆಯದಾಯಿತು. ಆ ಜಂಗಮರೂ ಕೇಳಿದ್ದರು. ಶಿವನೂ ಕೊಟ್ಟ." ಅದು ಕಾರ್ತಿಕ ಮಾಸದಲ್ಲಿ ಸಂಭವಿಸಿತು. ಮುಂಬೈಯಲ್ಲಿ ಆ ಕಾಲಕ್ಕೆ ಮಾವಿನ ಹಣ್ಣುಗಳು ದೊರೆಯುವುದುಂಟಷ್ಟೆ.

ದೊಡ್ಡ ಮಠದವರೇ ಬರಲಿ, ಅಥವಾ ಮಹಾ ಪಂಡಿತರೇ ಬರಲಿ, ಇಲ್ಲವೆ ಪರಿಚಯವಿಲ್ಲದ ಇಂತಹವರೇ ಬರಲಿ, ಯಾವ ಜಂಗಮ ಸ್ವಾಮಿಗಳು ಬಂದರೂ ಅವರ ವಿಚಾರದಲ್ಲಿ ಶಿವಯೋಗಿಗಳು ಸಮಾನವಾದ ಆದರ ಭಕ್ತಿಗಳುಳ್ಳವರಾಗಿಯೇ ಇರುತ್ತಿದ್ದರು. ಬಸವಣ್ಣನವರ ಈ ಕೆಳಗಿನ ವಚನಾಭಿಪ್ರಾಯವು ಶಿವಯೋಗಿಗಳಲ್ಲಿ ಒಡಮೂಡಿತ್ತು.

ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷ ವೆಂದು ಕಂಡು, ಕಂತೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚ ಮಹಾ ಪಾತಕ. ಇದು ಕಾರಣ ಅನ್ನ, ವಸ್ತ್ರ, ಧನ ಮಾಟದಲು ಎರಡಾಗಿ ಕಂಡೆ ನಾದಡೆ ನರಕದಲ್ಲಿಕ್ಕುವ ಕೂಡಲ ಸಂಗಮದೇವ.

ಒಂದು ಸಾರೆ ಅಥಣಿಯ ನೆರೆಹಳ್ಳಿಯಲ್ಲಿ ಅಲ್ಲಿಯ ಭಕ್ತರು ಬಸವ ಪುರಾಣವನ್ನು ಹೇಳಿಸುತ್ತಿದ್ದರು. ಅದರ ಕೊನೆಯ ಸಮಾರಂಭಕ್ಕೆ ಶ್ರೀ ಶಿವಯೋಗಿಗಳವರನ್ನು ಕರೆದುಕೊಂಡು ಹೋಗ ಬೇಕೆಂದು ಅಲ್ಲಿಯ ಭಕ್ತರು ಬಂದರು. ಮಠದಲ್ಲಿರುವವರಿಗೆ ಇದು ವಿಹಿತ ತೋರಲಿಲ್ಲ. "ಶಿವಯೋಗಿಗಳು ಮ್ಮಲ್ಲಿಗೆ ದಯ ಮಾಡಿಸಿದರೆ ಸರಿಯಾದ ವ್ಯವಸ್ಥೆಯಾಗಲಿಕ್ಕಿಲ್ಲ. ಅದು ಹಳ್ಳಿ. ಶಿವಯೋಗಿಗಳು ದಯಮಾಡಿಸುತ್ತಾರೆಂದು ಬಹು ಜನರು ಬರ ಬಹುದು. ನಿಮಗೆ ಬಹಳ ತೊಂದರೆಯಾದೀತು". ಎಂದು ಆ ಜನರಿಗೆ ಮಠದ ವ್ಯವಸ್ಥಾಪಕರು ತಿಳಿಸಿದರು.

ಆ ಹಳ್ಳಿಯವರು ಅವರ ಮಾತನ್ನು ಕೇಳದೆ "ಅಪ್ಪಾರ ಹತ್ತರ ನಾವೇ ಹೋಗಿ ಕರಕೊಂಡು ಹೋಗುತ್ತೇವೆ. ಅಪ್ಪಾರು ಬಂದರೆ ಎಲ್ಲಾ ನಡಿತದೆ" ಎಂದು ಹೇಳಿ ಶಿವಯೋಗಿಗಳ ಬಳಿಗೆ ಹೋಗಿ "ಬಸವ ಪುರಾಣ ನಡೆದದೆ, ತಾವು ಬಂದು ಪೂರೈಸಿಕೊಡಬೇಕು." ಎಂದು ಹೇಳಿಕೊಂಡರು. ಅಪ್ಪನವರ ಪುರಾಣವೆಂದರೆ ಶಿವಯೋಗಿ ಗಳಿಗೆ ಮೊದಲೇ ಬಹು ಭಕ್ತಿ ವಿಶ್ವಾಸ. ಕರೆಯಲು ಬಂದ ಆ ಹಳ್ಳಿಯ ಜನರ ಭಕ್ತಿ ಭಾವಗಳನ್ನು ನೋಡಿ ಬಹು ಸಂತೋಷದಿಂದ ಬರುತ್ತೇವೆಂದು ಅಪ್ಪಣೆ ಮಾಡಿದರು. ಆಗ ಆ ಹಳ್ಳಿಯ ಜನರ ಸಂತೋಷಕ್ಕೆ ಎಣೆಯೇ ಇಲ್ಲ.

ಹಳ್ಳಿಗೆ ಹೊರಡುವ ಸಿದ್ಧತೆಯಾಯಿತು. ಅಲ್ಲಿಯ ಜನರಿಗೆ ತೊಂದರೆಯಾಗಬಾರದೆಂದು ಮಠದಿಂದಲೇ ಎಲ್ಲಾ ಪದಾರ್ಥಗಳನ್ನೂ ತೆಗೆದುಕೊಂಡು ಹೊರಟದ್ದಾಯಿತು. ಆ ಹಳ್ಳಿಗೆ ಹೋಗಿ ಅವರ ಇಷ್ಟದಂತೆ ಆ ಮಹಾ ಗಣಾರಾಧನೆಯನ್ನು ಪೂರ್ತಿಗೊಳಿಸಿ ಸಕಲ ರಿಗೂ ಅತ್ಯಾನಂದವನ್ನುಂಟುಮಾಡಿದರು. ಶಿವಯೋಗಿಗಳು ಈ ಪ್ರಕಾರ ಅಂಥ ಹಳ್ಳಿಗೆ ದಯಮಾಡಿಸಿ ಆ ಭಕ್ತರ ಕಾರ್ಯವನ್ನು ಎಷ್ಟು ಸಂಭ್ರಮದಿಂದ ಸಾಂಗಗೊಳಿಸಿದರಲ್ಲಾ ! ಮಠದಿಂದಲೇ ಎಷ್ಟೋ ವೆಚ್ಚವಾಯಿತು. ಹೀಗೇಕೆ ಮಾಡಿರಬಹುದೆಂದು ಅನೇಕರು ಆಗ ಯೋಚಿಸಿದರು. ವಿರಕ್ತೋತ್ತಮರಾದ ಶ್ರೀ ಚೆನ್ನಬಸವಣ್ಣನವರ ಈ ಕೆಳಗಿನ ವಚನವನ್ನು ನೋಡಿದರೆ ಶಿವಯೋಗಿಗಳ ಆಗಿನ ಆಚರಣೆಯ ಇಂಗಿತವು ಗೊತ್ತಾಗುತ್ತದೆ.

> ಕಲ್ಪಿತದಿಂದ ಮಾಡುವ ಭಕ್ತ ನಿರ್ಧನಿಕನಾದರೆ ತನ್ನ ಕೈಧನವ ವೆಚ್ಚಿಸಿ ದಾಸೋಹವಂ ಮಾಡಿಸಿ ಆ ಭಕ್ತನ ಕೂಡಿ ಕೊಂಡು ಲಿಂಗಾರ್ಚನೆಯಂ ಮಾಡಿ ಅವನ ದಾಸೋಹಕ್ಕೆ ಸಲಿಸಿ ತಾ ಕರ್ತೃವಾಗಿ ನಿಂದು ಪರಿಣಮಿಸ ಬಲ್ಲಡೆ ಜಂಗಮವೆಂಬೆ. ಅವಂಗೆ ನಮೋ ನಮೋ. ಅಂತಲ್ಲದೆ ಮುನ್ನ ಮಾಡಿರಿ. ಈಗ ಮಾಡಿರಿ. ಇದೇನು ಭೋ? ಎಂದು ಜರಿದು ಝೋಂಕರಿಸಿ ಹೋಹರ ಜಂಗಮ ವೆಂಬೆನೆ? ಎನ್ನೆನು. ಆತ ಸೊನೆಗಾರ. ಆತ ದೋಷಾರ್ಥಿ. ಆತ ಭವಭಾರಿ. ಕೂಡಲ ಚೆನ್ನ ಸಂಗಮದೇವಾ.

ಒಂದು ದಿವಸ ಅಥಣಿಯ ವಾಸಸ್ಥರೇ ಶಿವಯೋಗಿಗಳ ದರ್ಶನಕ್ಕೆ ಪ್ರತಿನಿತ್ಯ ಬರುವಂತೆ ಬಂದರು. ಅವರ ಮನಸ್ಸಿನಲ್ಲಿ ತಮ್ಮ ಹೆಸರಿನಿಂದ ಶಿವಯೋಗಿಗಳ ಯೋಗಮಂಟಪದಲ್ಲಿ ಒಂದು ನಂದಾದೀವಿಗೆ ಇರಿಸಬೇಕೆಂಬ ಇಚ್ಛೆಯಿದ್ದಿತು. ಅದಕ್ಕಾಗಿ ಅವರು

ಕೆಲವು ರೂಪಾಯಿಗಳನ್ನು ಆ ದಿವಸ ತೆಗೆದುಕೊಂಡು ಬಂದು ಶಿವ ಯೋಗಿಗಳ ಮುಂದಿಟ್ಟು ಇವು ಇಲ್ಲಿ ನಂದಾದೀವಿಗೆಗೆ ಉಪಯೋಗ ವಾಗಲೆಂದು ಹೇಳಿಕೊಂಡರು.

ಆಗ ಶಿವಯೋಗಿಗಳು ಬೇಡವಾಗಿ ತಿಳಿಸಿದರು. ತಮ್ಮ ಮಂಟಪದಲ್ಲಿ ನಂದಾದೀವಿಗೆ ಇರಲಿ ಬುದ್ಧೀ, ಎಂದು ಪುನಃ ಪುನಃ ಹೇಳಿದರು ಶಿವಯೋಗಿಗಳು ಬೇಡವಾಗಿ ಎಷ್ಟು ಸಾರಿ ಅಪ್ಪಣೆ ಮಾಡಿದರೂ ಲಕ್ಷಿಸದೆ ಸ್ವಲ್ಪ ಸಲಿಗೆಯ ರೀತಿಯಲ್ಲಿ ಇರಲಿ ಬುದ್ಧೀ ಎಂದು ಹೇಳಿ ಆ ರೂಪಾಯಿಗಳನ್ನು ಅಲ್ಲಿಯೇ ಬಿಟ್ಟು ಹೊರಟು ಹೋದರು.

ಆಗ ಶಿವಯೋಗಿಗಳು ಎದ್ದು ಅಲ್ಲಿದ್ದ ಸೇವಕನನ್ನು ಕರೆದು “ ಈ ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಅವರ ಸೆರಗಿನಲ್ಲಿ ಕಟ್ಟು. ಅವರೇ ಮನೆಯಲ್ಲಿ ನಂದಾದೀವಿಗೆ ಇಟ್ಟುಕೊಳ್ಳಲಿ. ” ಎಂದು ಸ್ವಲ್ಪ ತೇಜವಾಗಿಯೇ ಅಪ್ಪಣೆ ಮಾಡಿದರು. ಆ ಪ್ರಕಾರ ಆ ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಅವರಿಗೆ ಸೇವಕನು ಕೊಟ್ಟನು. ಅಣತೀ ಚಂಡಯ್ಯನವರ ಈ ಕೆಳಗಿನ ವಚನವನ್ನು ನೋಡಿದರೆ ಶಿವಯೋಗಿಗಳ ಈ ನಿರ್ದಾಕ್ಷಿಣ್ಯವು ಸಹಜವಾಗಿದ್ದಿತೆಂದೇ ತೋರುತ್ತದೆ.

ನಿಜ ಜಂಗಮವೆಂದೆನಿಸಿರ್ಪರು ಕುಂದು ಕೊರತೆಯ
ನುಡಿವರೆ ? ಅನಾದಿ ಜಂಗಮವೆಂದೆನಿಸುವರು ಆಚರ
ಣೆಯ ಭೇದದಲ್ಲಿ ದಾಕ್ಷಿಣ್ಯವಿಡಿದಿರ್ಪರೆ ? ಶೂಗ ರಣ
ಪ್ರಸಂಗದಲ್ಲಿ ಮಗನ ನೋಡುವನೆ ? ಇದು ಕಾರಣ

ತಮ್ಮವರೇನು ? ಅನ್ಯರೇನು ? ಮೃದುವಾಗಿ ಮಾತಾ
ಡರು ಅಣತಿಯ ಲಿಂಗದ ಆಜ್ಞೆಯಲ್ಲಿ.

ನಂದಾದೀವಿಗೆಯ ವಿಚಾರದಲ್ಲಿ ಶಿವಯೋಗಿಗಳು ಇಷ್ಟು ವಿರೋಧ ತೋರಿಸಿದುದೇಕೆಂದು ಆಗ ಅನೇಕರು ಯೋಚಿಸಿದರು. ಬಸವಣ್ಣನವರ ಈ ಕೆಳಗಿನ ವಚನವನ್ನು ನೋಡಿದರೆ ಶಿವಯೋಗಿಗಳಿಗೆ ಆ ವಿಚಾರದಲ್ಲಿ ಅಷ್ಟು ಬೇಸರವುಂಟಾದುದು ಯುಕ್ತವಾಗಿದ್ದಿತೆಂದೇ ಸ್ಪಷ್ಟವಾಗುತ್ತದೆ.

ಹತ್ತು ಮತ್ತರ ಭೂಮಿ, ಬತ್ತುವ ಹಯನ, ನಂದಾ
ದೀವಿಗೆಯ ನಡಿಸಿಹೆವೆಂಬವರ ಮುಖವ ನೋಡಲಾಗದು.
ಅವರ ನುಡಿಯ ಕೇಳಲಾಗದು. ಅಂಡಜ, ಸ್ವೇದಜ,
ಉದ್ಭಿಜ, ಜರಾಯುಜವೆಂಬ ಪ್ರಾಣಿಗಳಿಗೆ ಭವಿತವ್ಯವ
ಕೊಟ್ಟವರಾರೊ ? ಒಡೆಯರಿಗೆ ಉಂಡಿಗೆಯ ಮುರಿ
ದಿಕ್ಕಿದಂತೆ 'ಎನ್ನಿಂದಲೇ ಆಯಿತ್ತು, ಎನ್ನಿಂದಲೇ
ಹೋಯಿತ್ತು' ಎಂಬವರ ಬಾಯಲ್ಲಿ ಮೆಟ್ಟಿ ಹುಡಿಯ
ಹೊಯ್ಯದೆ ಮಾಬನೇ ಕೂಡಲ ಸಂಗಮದೇವ ?

ಮುಂದೆ ಸ್ವಲ್ಪ ದಿನಗಳಲ್ಲಿಯೇ ಆ ನಂದಾದೀವಿಗೆ ಇಡಿಸಲು ಬಂದವರ ಮನೆಗೆ ಬೆಂಕಿ ಹತ್ತಿ ಬಹು ಅನರ್ಥವಾಯಿತು. ಅದೇಕೇ ಇರಲಿ. ಸಲಿಗೆಯಿದೆಯೆಂದು ಸಲ್ಲದ ರೀತಿಯಲ್ಲಿ ಮಹಾತ್ಮರ ಸಂಗಡ ನಡೆಯಬಹುದೆ ? ಹಾಗೆ ಮಾಡಿದರೆ ಹೀಗಾಗುತ್ತದೆಂದು ಬಸವಣ್ಣನವರೇ ಹೇಳಿದ್ದಾರೆ.

ಹಾವಿನ ಹೆಡೆಯ ಕೊಂಡು ಕೆನ್ನೆಯ ತುರಿಸಿಕೊಂಬಂತೆ,
ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕು ಬಿಡಿಸಿ

ಕೊಂಬಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಉಯ್ಯಾಲೆಯನಾಡುವಂತೆ, ಕೂಡಲ ಸಂಗನಶರಣರೊಡನೆ ಮರೆದು ಸರಸವಾಡಿದರೆ ಸುಣ್ಣದ ಕಲ್ಲ ಮಡಲಲ್ಲಿ ಕಟ್ಟಿಕೊಂಡು ಮಡುವಿನಲಿ ಬಿದ್ದಂತೆ.



## ೬ ನೆಯ ಪ್ರಕರಣ

# ಲಿಂಗ ಲೀಲೆ



ಶ್ರೀ ಶಿವಯೋಗಿಗಳು ಅಥಣಿ ಗಚ್ಚಿನ ಮಠದಲ್ಲಿ ೪೦ ವರುಷಗಳ ವರೆಗೆ ತಮ್ಮ ಗುರುಗಳ ಆಜ್ಞೆಯ ಪ್ರಕಾರ ವಾಸವಾಗಿದ್ದರು. ಆ ಮುಂಚೆ ದೇಶ ಸಂಚಾರ ಮಾಡಿ ಬಂದಾಗ ೪೫ ವರುಷದವರಾಗಿದ್ದರು. ಈ ಪ್ರಕಾರ ೮೫ ವರುಷ ಜೀವಿಸಿ ಶ್ರೀ ಬಸವಾದಿ ಪ್ರಮಥರು ಬೋಧಿಸಿರುವ ಆಚಾರಗಳಿಗನುಗುಣವಾಗಿಯೇ ಆಚರಿಸಿ ಪರಮ ಪೂಜ್ಯರಾದರು. ಕಳೆದ ಐದು ಪ್ರಕರಣಗಳಲ್ಲಿ ವಿವರಿಸಿದ ಅನೇಕ ಸಂಗತಿಗಳಿಂದ ಪ್ರಮಥರ ಆಚಾರಗಳನ್ನೇ ಶಿವಯೋಗಿಗಳು ಆಚರಿಸಿದ್ದರೆಂಬುದು ಸ್ಪಷ್ಟವಾಗುವುದಿಲ್ಲವೆ ?

ಶ್ರೀ ಶಿವಯೋಗಿಗಳು ೮೫ ವರುಷದ ಮುಪ್ಪಿನಲ್ಲಿಯು ಕೂಡಾ ತಮ್ಮ ಲಿಂಗಪೂಜೆಗೆ ಪತ್ರಿ ಪುಷ್ಪಾದಿಗಳನ್ನು ತಾವೇ ತಂದುಕೊಳ್ಳುತ್ತಿದ್ದರು. ಶಾಲಿವಾಹನ ಶಕೆ ೧೮೪೩ ನೆಯ ಕಾರ್ತಿಕ ಮಾಸದಲ್ಲಿ ಒಂದು ದಿನ ಬೆಳಿಗ್ಗೆ ಹೂವುಗಳನ್ನೆತ್ತುತ್ತಿದ್ದಾಗ ಏಕೋ ದೇಹ ಜೋಲಿ ಹೋಯಿತು. ಚಳಿಗಾಲವಾದುದರಿಂದ ಹೀಗಾಗಿರಬಹುದೆಂದು ಕೆಲವರು ತಿಳಿದರು. ಮುಪ್ಪಿನವರಾದುದರಿಂದ ಹೀಗೆ ಜೋಲಿ ಹೋಗಿರಬೇಕೆಂದು ಕೆಲವರು ಯೋಚಿಸಿದರು.

ಆದರೆ ಅವೆಲ್ಲ ಸುಳ್ಳೆಂದು ತೋರಿತು. ಅಂದಿನಿಂದ ಶಿವಯೋಗಿಗಳ ನಡೆ ನುಡಿಗಳೇ ಬೇರೆಯಾದವು. ಜಗತ್ತಿನ ಕಡೆ ಚಿತ್ತವೇ

ಇಲ್ಲದಂತಾಯಿತು. ಪರಿಚಯಸ್ಥರನ್ನು ಕೂಡಾ ಗುರುತಿಸದಂತಾದರು. ಯಾವಾಗಲೂ ಲಿಂಗಪೂಜೆಯ ನೆನಹು. ಸ್ನಾನಕ್ಕೆ ಹೊತ್ತಾಯಿತು, ಲಿಂಗಪೂಜೆ ಮಾಡಬೇಕು, ಇದೇನು ಎಷ್ಟು ಬೆಳಗೆ? ಎಂಬುದಾಗಿ ಮಾತನಾಡಲಾರಂಭಿಸಿದರು.

ಕುಳಿತಾಗ, ಮಲಗಿದಾಗ, ನಡೆಯುವಾಗ ಲಿಂಗಪೂಜೆಯ ದೃಷ್ಟಿ. ಹಸ್ತದಲ್ಲಿ ಭಸ್ಮವಿಲ್ಲದಿದ್ದರೂ ಭಸ್ಮವನ್ನು ಧರಿಸಿಕೊಳ್ಳುವುದು, ಜಪಮಾಲೆಯಿಲ್ಲದಿದ್ದರೂ ಜಪವನ್ನು ಎಣಿಸುವುದು.

> ಎಲ್ಲಿ ನೋಡಿದಡಲ್ಲಿ ನೀನೇ ದೇವ. ಎಲ್ಲಿ ಮುಟ್ಟಿದಡಲ್ಲಿ ನೀನೇ ದೇವ. ಎಲ್ಲಿ ಭಾವಿಸಿದಡಲ್ಲಿ ನೀನೇ ದೇವ. ಎಲ್ಲೆಡೆಯಲ್ಲಿ ನಿಮ್ಮ ಪ್ರಭೆಯೇ ಮುಸುಕಿತಾಗಿ ಅಖಂಡೇಶಾ ನೀನೆಂಬುದಕ್ಕೆ ತೆರಹಿಲ್ಲ ದೇವಾ.

ಎಂಬುದಾಗಿ ಶ್ರೀ ಷಣ್ಮುಖ ಸ್ವಾಮಿಗಳು ಹೇಳಿದಂತೆ ಶಿವ ಯೋಗಿಗಳು ಲಿಂಗಪೂಜೆ ಮತ್ತು ಬೆಳಕುಗಳಲ್ಲಿಯೇ ಲೀನವಾಗಿದ್ದರು. ಹೀಗೆ ಲಿಂಗಲೀಲೆಯುಂಟಾದ ಕಾರಣವನ್ನು ಶ್ರೀ ಪ್ರಭುದೇವರ ಈ ಕೆಳಗಿನ ವಚನದಿಂದ ತಿಳಿದುಕೊಳ್ಳಬಹುದು.

> ಕರಸ್ಥಳದ ಲಿಂಗವು ಕಾಯಕ್ಕೆ ವೇಧಿಸಿದಲ್ಲಿ ಕಾಯ ಲಿಂಗವಾಯಿತ್ತು. ಅಂತಾದ ಮಹಾ ಘನಲಿಂಗವೇ ಭಾವಕ್ಕೆ ವೇಧಿಸಿದಲ್ಲಿ ಭಾವಲಿಂಗವಾಯಿತ್ತು. ಅಂತಾದ ಮಹಾ ಘನಲಿಂಗವೇ ಜ್ಞಾನಕ್ಕೆ ವೇಧಿಸಿದಲ್ಲಿ ಜ್ಞಾನಲಿಂಗ ವಾಯಿತ್ತು. ಅಂತಾದ ಕಾರಣ ನಮ್ಮ ಗುಹೇಶ್ವರನ ಶರಣಂಗೆ ಅರಿವರತು, ಕುರುಹು ನಷ್ಟವಾಗಿ ತಾನೆಂಬ ಭಾವ ಉರಿಯುಂಡ ಕರ್ಪುರದಂತಾಯಿತ್ತು.

ಶ್ರೀ ಶಿವಯೋಗಿಗಳು ೬೦-೭೦ ವರುಷಗಳಿಂದಲೂ ಇಷ್ಟಲಿಂಗ ದಲ್ಲಿ ಅಪಾರವಾದ ನಿಷ್ಠೆಯುಳ್ಳವರಾಗಿ ಅದನ್ನು ಪೂಜಿಸುತ್ತಾ ಬಂದುದರಿಂದ ಅಂಗಕ್ಕೆ ದೃಢತರವಾದ ಲಿಂಗಸಂಸ್ಕಾರವುಂಟಾಗಿ ದ್ದಿತು. ಆದಕ್ಕಾಗಿಯೇ ಹಸ್ತಾದಿ ಅವಯವಗಳು ಭಸ್ಮಧಾರಣಾದಿ ಲಿಂಗಪೂಜೆಯ ಕಾರ್ಯಗಳನ್ನು ತಾವೇ ಮಾಡುತ್ತಿದ್ದವು. ಮನ ಸ್ಸಿನಲ್ಲಿಯೂ ಬುದ್ಧಿಯಲ್ಲಿಯೂ ಲಿಂಗಧ್ಯಾನ, ಲಿಂಗಜ್ಞಾನಗಳೇ ದೀರ್ಘಕಾಲದಿಂದಲೂ ಆಳವಟ್ಟಿದ್ದರಿಂದ ಅವು ಕೂಡಾ ಲಿಂಗ ಮಯವಾಗಿದ್ದವು. ಆದುದರಿಂದ ಜೀವನಿಗಾಗುವ ಬಾಹ್ಯ ವಸ್ತು ಜ್ಞಾನವು ಶೂನ್ಯವಾಗಿ ಅಂತರ್ಯದ ಶಿವಜ್ಞಾನವೇ ಪ್ರಕಾಶಿಸು ತ್ತಿದ್ದಿತು. ಕರ್ಪುರಕ್ಕೆ ಉರಿಯನ್ನು ತಗಲಿಸಿದರೆ ಹೇಗೆ ಅದು ಸುಟ್ಟು ಉರಿಯಲ್ಲಿಯೇ ಬೆರಿತು ಹೋಗುತ್ತದೆಯೋ ಹಾಗೆಯೇ ಜೀವಭಾವವು ನಷ್ಟವಾಗಿ ಶಿವಭಾವದಲ್ಲಿ ಬೆರೆತು ಹೋಗಿದ್ದಿತು.

ಇದೇ ವೀರಶೈವ ಸಿದ್ಧಾಂತ. ಇದೇ ಲಿಂಗಾಂಗಸಾಮರಸ್ಯ. ಇದೇ ಪ್ರಮಥರಾಚಾರದಂತೆ ಆಚರಿಸಿದರಾಗುವ ಫಲ. ಸತ್ತು ಸ್ವರ್ಗವನ್ನು ಸೇರಬೇಕೆಂಬುದು ಪ್ರಮಥರ ಉದ್ದೇಶವಲ್ಲ. ಇದ್ದಾ ಗಲೇ ಕಾಯವನ್ನು ಕೈಲಾಸ ಮಾಡಿ ಜೀವನವನ್ನು ಶಿವನನ್ನಾಗಿ ಮಾಡಿಕೊಳ್ಳಬೇಕು. ಬಸವಣ್ಣನವರು ಹೀಗೆ ಸ್ಪಷ್ಟವಾಗಿ ಸಾರಿದ್ದಾರೆ.

**ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ**
**ಕೇವಲ ಶರಣಾಗಲರಿಯ. ಸತ್ತು ಬೆರಸಿಹೆನೆಂದರೆ**
**ಕಬ್ಬಿನ ತುದಿಯ ಮೆಲಿದಂತೆ! ಕೂಡಲ ಸಂಗಮದೇವಾ.**

ಕಬ್ಬಿನ ತುದಿಯಲ್ಲಿ ಹೇಗೆ ಸ್ವಾರಸ್ಯವಿಲ್ಲವೋ ಹಾಗೆಯೇ ದೇಹವನ್ನು ಬಿಟ್ಟನಂತರ ದೇವರಲ್ಲಿ ಸೇರುತ್ತೇವೆಂಬುದರಲ್ಲಿಯೂ ಸ್ವಾರಸ್ಯವಿಲ್ಲ. ದೇಹವನ್ನು ಧರಿಸಿರುವಾಗಲೇ ಶಿವನಲ್ಲಿ ಸೇರಿರಬೇಕು. ಎಂದರೆ ಅಂಗದ ಎಲ್ಲ ಕ್ರಿಯೆಗಳು ಲಿಂಗಕ್ರಿಯೆಗಳಾಗಿರಬೇಕು.

ಇದೇ ಲಿಂಗ ಲೀಲೆ. ಇಂತಹ ಲೀಲೆಯಲ್ಲಿ ಶಿವಯೋಗಿಗಳವರು ೪ ತಿಂಗಳುಗಳನ್ನು ಕಳೆದು ಚೈತ್ರ ಬಹುಳ ಪ್ರತಿಪದೆಯ ಸಾಯಂಕಾಲ ಜಡದೇಹವನ್ನು ಬಿಟ್ಟು ಲಿಂಗದಲ್ಲಿ ಬೆರೆದರು. ಅತ್ತ ಸೂರ್ಯನು ಅಸ್ತನಾದ; ಇತ್ತ ಪ್ರಮಥರಾಚಾರ ದೀಪಿಕೆ ಅಡಗಿತು. ಪುನಃ ಸೂರ್ಯನು ಉದಯವಾದಂತೆಯೇ ಆ ಪ್ರಮಥರ ತತ್ವಜ್ಯೋತಿಯೂ ಉದಯವಾಗುವುದಿಲ್ಲವೇ ? ಆಗೇ ಆಗುವುದು. ಅಗೋ ಈಗಾಗಲೇ ಕತ್ತಲೆ ಹರಿಯಹತ್ತಿದೆ. ಬರಲಿ ! ಆ ಬೆಳಕು ಜಾಗ್ರತೆ ಬರಲಿ !



